KARNATAKA

# VIKRAMÓRVASÍYA NÁTAKAM.

---

ಕರ್ಣಾಟಕ

# ವಿಕ್ರಮೋರ್ವಶೀಯ ನಾಟಕಂ.


ಮೈಸೂರು ಶ್ರೀಮನ್ಮಹಾರಾಜರವರ ಆಸ್ಥಾನ ವಿದ್ವಾಂಸರಾದ
ಸೋಸಲೆ ಅಯ್ಯಾಶಾಸ್ತ್ರಿಗಳಿಂದ ರಚಿಸಲ್ಪಟ್ಟಿದು.



ಮೈಸೂರು:
ಸರಕಾರದ ಬ್ರ್ಯಾಂಚ್ ಮುದ್ರಾಶಾಲೆಯಲ್ಲಿ ಮುದ್ರಿಸಲ್ಪಟ್ಟಿತು,
೧೮೯೦.

ಕರ್ಣಾಟಕಭಾಷೆಯನ್ನು ಅಭಿವೃದ್ಧಿಪಡಿಸಬೇಕೆಂಬ ಶ್ರೀಮನ್ಮಹಾರಾಜರವರ ಅಭಿಪ್ರಾಯಾನುಸಾರವಾಗಿ ವಿದ್ಯಾಭಿಮಾನಿಗಳಾದ ದರ್ಬಾರ್ ಬಕ್ಷಿ ರಾಯಬಹದೂರ್ ಮಹಾರಾಜಶ್ರೀ ಎ. ನರಸಿಂಹಯ್ಯಂಗಾರ್ಯರವರಿಂದಲೂ, ಮತ್ತು ರಾಜಬಂಧುಗಳಾದ ಮಹಾರಾಜಶ್ರೀ ಬಕ್ಷೀ ಜೆ. ಲಿಂಗರಾಜೇಅರಸಿನವರಿಂದಲೂ ಪ್ರೋತ್ಸಾಹಿಸಲ್ಪಟ್ಟು, ಕಾಳಿದಾಸ ಮಹಾಕವಿಯಿಂದ ವಿರಚಿತವಾದ ಸಂಸ್ಕೃತ ವಿಕ್ರಮೋರ್ವಶೀಯ ನಾಟಕವನ್ನು ಈ ಥಿಯೇಟರುಗಳಲ್ಲಿ ಆಡುವದಕ್ಕೆ ಅನುಕೂಲವಾಗಿಯೂ ನಾಟಕಸಂವಿಧಾನಕೆಡದಂತೆಯೂ ಕೆಲವು ವರ್ಣನಾವಿಭಾಗಗಳನ್ನು ಬಿಟ್ಟು ಗಾನಯೋಗ್ಯವಾದ ಪದಗಳಿಂದ ಕೂಡಿ ಪಂಡಿತ ಪಾಮರ ರಂಜಕವಾಗಿರುವಂತೆ ಕರ್ಣಾಟಕಭಾಷೆಯಲ್ಲಿ ಮೊದಲು ಸಂಕ್ಷೇಪವಾಗಿ ರಚಿಸಿದ್ದೆನು. ಈಗ ಸಂಸ್ಕೃತನಾಟಕದಲ್ಲಿರುವ ಒಂದಂಶವನ್ನೂ ಬಿಡದೆ ಓದುವವರಿಗೂ ನಾಟಕದವರಿಗೂ ಅನುಕೂಲವಾಗಿರುವಂತೆ ರಚಿಸಿರುತ್ತೇನೆ. ಇದನ್ನು ಆಸ್ಥಾನಪಂಡಿತರಾದ ವೇದಮೂರ್ತಿ ಚಾಮರಾಜನಗರದ ರಾಮಶಾಸ್ತ್ರಿಗಳೂ ಮೈಸೂರು ಗೌರ್ನಮೆಂಟ್ ಕನ್ನಡಸ್ಕೂಲ್ ಹೆಡಮಾಸ್ಟರ್ ಮಹಾರಾಜಶ್ರೀ ಬಿ. ಮಲ್ಲಪ್ಪನವರೂ ಆಮೂಲಾಗ್ರವಾಗಿ ಶೋಧಿಸಿನೋಡಿ ಸಮ್ಮತಿಸಿರುವದಕ್ಕಾಗಿ ಕೃತಜ್ಞನಾಗಿರುವೆನು. ಇನ್ನೇನಾದರೂ ಪ್ರಮಾದವಿದ್ದಲ್ಲಿ ಗುಣಪಕ್ಷಪಾತಿಗಳಾದ ವಿದ್ವಾಂಸರು ತಿಳಿಸಿದರೆ ಅದನ್ನು ಕೃತಜ್ಞತೆಯಿಂದ ಗ್ರಹಿಸಿ ಎರಡನೆಯ ಮುದ್ರಣದಲ್ಲಿ ಪರಿಷ್ಕರಿಸುತ್ತೇನೆ.

☞ ಓದುವವರು ಕೆಳಗಡೆ ಗೀಟು ಹಾಕಿರುವ ಸಣ್ಣಾಕ್ಷರದಲ್ಲಿ ಮುದ್ರಿತವಾಗಿರುವ ಪದಗಳನ್ನು ಬಿಟ್ಟು, ಓದಿಕೊಳ್ಳತಕ್ಕದ್ದು. ನಾಟಕದವರು (*) ಮೊದಲಾದ ಗುರುತುಗಳುಳ್ಳ ಪದ್ಯಗಳನ್ನೂ ವಾಕ್ಯಗಳನ್ನೂ ಬಿಟ್ಟು ಅವುಗಳಿಗೆ ಪ್ರತಿಯಾಗಿ ಕೆಳಗಡೆ ಸಣ್ಣಾಕ್ಷರದ ಅದೇ ಗುರುತಿನ ಪದಗಳನ್ನು ಉಪಯೋಗಿಸಿಕೊಳ್ಳತಕ್ಕದ್ದು.

ಶಾರ್ವರಿನಾಮ
ಚೈತ್ರ

ಸೋಸಲೆ ಅಯ್ಯಾಶಾಸ್ತ್ರಿ.

# KARNATAKA VIKRAMORVASIYA NATAKAM.

# ಕರ್ನಾಟಕ ವಿಕ್ರಮೋರ್ವಶೀಯ ನಾಟಕಂ.

## ಪ್ರಥಮಾಂಕಂ.

*ವೃತ್ತ॥ ಪುರುಷನದೊರ್ವನೆಲ್ಲ ಭುವನಾವರಿಸಿರ್ದ್ದಪನೆಂದಪರಿತ್ರಯಿಯಾ ।
ಶಿರದೊಳಭಿಜ್ಞರಾವನ ನೆನಸ್ವಗ ವಿಯಾಶ್ವರಶಬ್ದ ಮರ್ಥಿಪ ॥
ತ್ತರವೆನಿಸಿರ್ಪ್ಪುದಾವನೊಳ್ ಮೋಕ್ಷಕೆ ಮಾರ್ಗಿಪರಾವನಂ ಹೃದಂ ।
ತರದೆ ಯಮೀಂದ್ರರಾಶಿವನೊಡಹರ್ಗೆ ಭಕ್ತಿವಶಂ ಮದಿಷ್ಟಮಂ ॥

ಸೂತ್ರಧಾರಂ.—(ತೆರೆಯಕಡೆ ನೋಡಿ) ಎಲೈ ಪಾರಿಪಾರ್ಶ್ವಕನೆ ಇತ್ತಬಾ.

ಪಾರಿಪಾರ್ಶ್ವಕಂ.—(ಪ್ರವೇಶಿಸಿ) ಆರ್ಯನೆ ಇದೊ ಬಂದೆನು.

---

*ವೃತ್ತ॥ ಶ್ರೀಮಚ್ಚಂದ್ರಕಲಾವತಂಸಿತ ಜಟಾಜೂಟೋಲ್ಲಸಲ್ಲಿಂಗಕಂ ।
ಭೂಮಿ ವ್ಯೋಮ ದಿಗಂಬರ ಪ್ರಸ್ಫುರಂ ಗೌರೀಸಮಾಲಿಂಗಿತಂ ॥
ಶ್ರೀಮದಾಶ್ರಿತ ನಿಜಪ್ರಭಾವ ಮಿಳಿಲ ಶ್ರೇಯೋನಿಧಾನಂ ಶ್ಶಿವಾ ।
ಧಾಮಂ ಧಾಮಮದೊಂದು ಮೌಳಿಶೇಖರಂ ಶ್ರೀಚಾಮರಾಜೇಂದ್ರನಾ ॥

॥ ರಾಗ—ಖರಹರಪ್ರಿಯ ॥ ॥ ರೂಪಕತಾಳ ॥

ಶ್ರೀಲಲಿತೆ ಪಾಲಯಮಾಂ । ಶೈಲರಾಜಜಾತೆ ॥ ಪ ॥ ತ್ರೈಲೋಕ್ಯಾವನಸಂಗತೆ । ನಾಳೀಕಭವಾರ್ಚಿತೆ ॥ ಅ ॥ ರಾಜರಾಜೇಶ್ವರಿ ಗೌರಿ । ರಾಜಮುಖಿ ಸುಂದರಿ ॥ ಶ್ರೀಜನಾರ್ದನ ಸೋದರಿ । ಶ್ರಿತಕಲ್ಪಕ ವಲ್ಲರಿ ॥ ೧ ॥ ವರದೆ ಪಾವನಾತ್ಮಚರಿತೆ । ವರದಾನೇಂದ್ರ ಲೋಕಗೀತೆ ॥ ತರುಣೇಂದು ಕಲಾಂಕಿತೆ । ಕರುಣಾರಸ ಪೂರಿತೆ ॥ ೨ ॥ ಕ್ಷ್ಮಾಮಹೀಕ್ಷ್ವಪಾಲನಶೀಲೆ । ಕಾಮಿತಾರ್ಥ ದಾನಲೋಲೆ ॥ ಚಾಮುಂಡೇಶ್ವರಿ ಮಂಗಳೆ । ಚಾಮರಾಜ ಪಾಲೆ ॥ ೩ ॥

ಸೂ.—ಪಾರಿಪಾರ್ಶ್ವಕನೆ ಈ ಸಭಾಜನರು ಪೂರ್ವ ಕವಿಗಳ ರಸವತ್ತಾದ ನಾಟಕಗಳನ್ನು ನೋಡಿರುವರು. ಈಗಲಾ ಕಾಳಿದಾಸ ಮಹಾಕವಿ ರಚಿತವಾದ ವಿಕ್ರಮೋರ್ವಶೀಯವೆಂಬ ನಾಟಕವು ಕರ್ಣಾಟಕ ಭಾಷೆಯಲ್ಲಿ ಶ್ರೀಮತ್ಕರ್ಣಾಟಾಧೀಶ್ವರ ಚಾಮರಾಜೇಂದ್ರ ಒಡೆಯರವರ ಆಸ್ಥಾನವಿದ್ವಾಂಸನಾದ ಸೋಸಲೇ ಅಯ್ಯಾಶಾಸ್ತ್ರಿಯಿಂದ ರಚಿಸಲ್ಪಟ್ಟಿರುವದು. ಆ ನಾಟಕವನ್ನಾಡಿ ಇವರನ್ನು ಸಂತೋಷಪಡಿಸುತ್ತೇನೆ. ಅದ್ದರಿಂದ ನಮ್ಮ ಪಾತ್ರವರ್ಗವನ್ನು ಎಚ್ಚರಗೊಳಿಸು.

ಪಾ.—ಆರ್ಯನ ಅಪ್ಪಣೆ ಯಾದಂತಾಗಲಿ. (ಎಂದು ಹೊರಟು ಹೋದನು).

ಸೂ.—ಈ ಸಭಾಸದರಿಗೆ ನಾನು ವಿಜ್ಞಾಪಿಸಿಕೊಳ್ಳುವೆನು.

ಕಂದ ॥ ಕಿವಿಗುಡುವುದು ಸವಿದರೊಳಗಿ ।
ಪ್ರಣಯಿಗಳ್ ದಾಕ್ಷಿಣ್ಯದಿಂದೆ ಮೋಹಸತ್ಕಥೆಯೊಳ್ ॥
ತವೆಕೌತುಕದಿನಯ್ಯ ಸುಧೀ ।
ಕವಿ ಕನ್ನಡಿಸಿರ್ಪ ಕಾಳಿದಾಸನ ಕೃತಿಯೊಳ್ ॥ ೧

ತೆರೆಯಲ್ಲಿ.—ಅಯ್ಯೋ! ನಮ್ಮನ್ನು ರಕ್ಷಿಸಿರಕ್ಷಿಸಿ!

ಸೂ.—(ಕೇಳಿ) ಇದೇನು! ಯಾರೋ ವಿಮಾನಚಾರಿಗಳು ದೈನ್ಯದಿಂದ ಮೊರೆಯಿಡುವಂತಿದೆ (ಯೋಚಿಸಿ) ಓಹೊ! ತಿಳಿಯಿತುತಿಳಿಯಿತು—

ಕಂ ॥ ಧನಪತಿಯಂ ಸೇವಿಸಿ ನ ।
ರ್ತನದಿಂದಂ ಮಗುಳ್ದು ಬರುತ ವಿದಗ್ಧೋರ್ವಶಿಯಂ ॥
ದನುಜರ್ ಸೆರೆವಿಡಿಯೆ ಸುರಾಂ ।
ಗನೆಯರಿವರ್ ದೀನರವದೆ ಮೊರೆಯಿಡುತಿರ್ಪರ್ ॥ ೨

(ಎಂದು ಹೊರಟು ಹೋದನು).

ಇಂತಿದು ಪ್ರಸ್ತಾವನೆ.

(ಅನಂತರ ಅಪ್ಸರಸ್ತ್ರೀಯರು ಪ್ರವೇಶಿಸುವರು).

ಅಪ್ಸ.—ಅಯ್ಯೋ! ದೇವತೆಗಳಲ್ಲಿ ಪಕ್ಷಪಾತವೂ ಗಗನದಲ್ಲಿ ಸಂಚಾರ ಶಕ್ತಿಯೂ ಇರತಕ್ಕವರು ನಮ್ಮನ್ನು ರಕ್ಷಿಸಿರಕ್ಷಿಸಿ.

(ಮಹಾರಾಜನಾದ ಪುರೂರವನು ಸಾರಥಿಯೊಡನೆ ರಥವನ್ನೇರಿ ಪ್ರವೇಶಿಸುವನು).

ರಾಜ.—ಅಳಬೇಡಿ ಅಳಬೇಡಿ; ಇದೊ ನಾನು ಸೂರ್ಯೋಪಾಸನೆಯನ್ನು ನೆರವೇರಿಸಿಕೊಂಡು ಬಂದಿರುವೆನು. ನಾನು ಪುರೂರವನು. ಯಾತಕ್ಕೆ ಮೊರೆಯಿಡುತ್ತೀರಿ ಹೇಳಿ ಹೇಳಿ.

ರಂಭೆ.—ಆರ್ಯನೆ ದೈತ್ಯಬಾಧೆಯಿಂದ ಮೊರೆಯಿಟ್ಟೆವು.

ರಾಜ.—ನಿಮ್ಮ ವಿಷಯದಲ್ಲಿ ಯಾವ ದೈತ್ಯನು ಏನಪರಾಧವನ್ನು ಮಾಡಿರುವನು?

ಮೇನಕೆ.—ಮಹಾರಾಜನೆ ತಪೋವಿಶೇಷದಿಂದ ಭೀತನಾದ ಇಂದ್ರನಿಗೆ ತಪಸ್ವಿಗಳನ್ನು ಜಯಿಸುವ ವಿಷಯದಲ್ಲಿ ಸುಕುಮಾರಾಸ್ತ್ರದಂತೆಯೂ ಸ್ವರ್ಗಕ್ಕೆ ಅಲಂಕಾರ ಪ್ರಾಯಳಾಗಿಯೂ ಸೌಂದರ್ಯದಿಂದ ಲಕ್ಷ್ಮಿಯನ್ನು ತಿರಸ್ಕರಿಸತಕ್ಕವಳಾಗಿಯೂ ಇರುವ ನಮ್ಮ ಪ್ರಿಯಸಖಿಯಾದ ಊರ್ವಶಿಯು ಕುಬೇರ ಭವನದಿಂದ ಬರುತ್ತಿದ್ದಳು. ಆ ಸಮಯದಲ್ಲಿ ಹಿರಣ್ಯಪುರವಾಸಿಯಾದ ಕೇಶಿಯೆಂಬ ದೈತ್ಯನು ಕಂಡು ಆಕೆಯನ್ನೂ ಸಖಿಯಾದ ಚಿತ್ರಲೇಖೆಯನ್ನೂ ಹಿಡಿದುಕೊಂಡು ಹೋದನು.

ರಾಜ.—ಆ ದೈತ್ಯನು ಹೋದಮಾರ್ಗ ನಿಮಗೆ ಗೊತ್ತಿರುವದೆ?

ಸಹಜನ್ಯೆ.—ಈಶಾನ ದಿಕ್ಕಿಗೆ ಹೋದನು.

ರಾಜ.—ಹಾಗಾದರೆ ನಿಮ್ಮ ದುಃಖವನ್ನು ಬಿಡಿ ಈಗಲೇ ನಿಮ್ಮ ಸಖಿಯನ್ನು ಬಿಡಿಸಿಕೊಂಡು ಬರುವದಕ್ಕೆ ಯತ್ನಿಸುವೆನು.

ಅಪ್ಸ.—ಚಂದ್ರನಿಗೆ ಮೊಮ್ಮಗನಾದ ನಿನಗೆ ಇದು ಯೋಗ್ಯವು.

ರಾಜ.—ನನ್ನನ್ನು ನೀವೆಲ್ಲಿ ಕಾದಿರುತ್ತೀರಿ?

ಅಪ್ಸ.—ಈ ಹೇಮಕೂಟ ಪರ್ವತದಲ್ಲಿ.

ರಾಜ.—ಎಲೈ ಸೂತನೆ ಈಶಾನದಿಕ್ಕಿಗೆ ವೇಗದಿಂದ ರಥವನ್ನು ನಡಸು ಬೇಗ ಹೋಗಬೇಕು.

ಸೂತ.—ಆಯುಷ್ಮಂತನ ಅಪ್ಪಣೆಯಾದಂತೆ (ಎಂದು ರಥವನ್ನು ನಡಸುವನು).

ರಾಜ.—(ರಥವೇಗವನ್ನು ನೋಡಿ) ಭಾಪುಭಾಪು! ಈ ರಥವೇಗದಿಂದ ನಾನು ನನಗಿಂತಲೂ ಮುಂಚೆ ಹೊರಟ ಗರುಡನನ್ನಾದರೂ ಹಿಡಿಯಬಲ್ಲೆನು. ಇಂದ್ರನಿಗೆ ಪರಮ ದ್ರೋಹಿಯಾದ ಆ ದೈತ್ಯನನ್ನು ಹಿಡಿಯುವದೊಂದಸಾಧ್ಯವೆ? ಆಹ!

ವೃ॥ ಪವಿವೃತ್ತ ಧೂಳಿಯಂತೆ ಮುಗಿಲಗ್ರದೆ ಚಲೋತ್ಕಟವಾಗಿ ಚಿತ್ರದೊಳ್।
ಬರೆದವೊಲಾಚವಿಸ್ಫುರದು ತುರಂಗಶಿರಸ್ಥಮುದಗ್ರಚಾಮರಂ॥
ತಿರುಗುವ ಗಾಲಿಪಟ್ಟಿಕುವರಾಂತರದೊಳ್ ಪರಿತೋಂದರಾಳಿಯುಂ।
ನಿರುಕಿಸೆ ನಿಂದುದೀರಥದ ವೇಗದೆ ನಟ್ಟನೆ ಕೇತನಾಂಬರಂ॥ ೪

(ಎಂದು ಸೂತನೊಡನೆ ಹೊರಟು ಹೋದನು).

ರಂಭೆ.—ಇನ್ನು ನಾವು ಗೊತ್ತುಮಾಡಿರುವ ಸ್ಥಳಕ್ಕೆ ಹೋಗೋಣ ನಡೆಯಿರಿ.

ಉಳಿದವರು.—ಒಳ್ಳೇದು (ಎಂದು ಎಲ್ಲರೂ ಪರ್ವತಾರೋಹಣವನ್ನು ನಟಿಸುವರು).

ರಂಭೆ.—ಎಲೌ ಸಖಿಯರೆ ಆ ರಾಜರ್ಷಿಯು ನಮ್ಮ ಮನೋವ್ಯಥೆಯನ್ನು ಹೋಗಲಾಡಿಸಬಲ್ಲನೆ?

ಮೇನಕೆ.—ನೀನು ಸಂಶಯಪಡಬೇಡ. ಇಂದ್ರನೂಕೂಡ ತನಗೆ ಶತ್ರುಬಾಧೆಯುಂಟಾದಾಗ ಭೂಲೋಕದಲ್ಲಿ ಅನೇಕ ರಾಜರಿದ್ದಾಗ್ಯೂ ಈ ಮಹಾರಾಜನನ್ನೇ ಕರೆಯಿಸಿ ಬಹುಮಾನದಿಂದ ತನ್ನ ಸೇನೆಗೆ ಅಧಿಪತಿಯನ್ನಾಗಿ ಮಾಡುವನು.

ರಂಭೆ.—ಹಾಗೆಯೇ ಆ ಮಹಾರಾಜನು ಈ ವಿಷಯದಲ್ಲೂ ಜಯಶೀಲನಾಗಲಿ.

ಸಖ.—(ಹಾಗೆಯೇ ಕ್ಷಣಕಾಲ ನಿಂತುನೋಡಿ) ಎಲೌ ಸಖಿಯರೆ ನಿಮ್ಮ ವ್ಯಸನವನ್ನು ಬಿಡಿ. ಹರಿಣಾಂಕಧ್ವಜದಿಂದೊಪ್ಪುತ್ತಿರುವ ಚಂದ್ರಪ್ರಸಾದದಿಂದ ಪ್ರಾಪ್ತವಾದ ಆ ಮಹಾರಾಜನರಥವು ಇದೋ ಕಾಣಿಸುತ್ತಿರುವದು. ಆತನೆಂದಿಗೂ ಜಯಶಾಲಿಯಾಗದೆ ಹಿಂತಿರುಗಿ ಬರತಕ್ಕವನಲ್ಲ.

(ಎಲ್ಲರೂ ಕತ್ತೆತ್ತಿ ನೋಡುತ್ತಿರಲು, ರಥಾರೂಢನಾಗಿ ರಾಜನೂ ಸೂತನೂ ಚಿತ್ರಲೇಖೆಯನ್ನೊರಗಿಕೊಂಡು ಭಯದಿಂದ ಕಣ್ಣು ಮುಚ್ಚಿಕೊಂಡಿರುವ ಊರ್ವಶಿಯೂ ಸಹ ಪ್ರವೇಶಿಸುವರು).

ಚಿತ್ರ.—ಎಲೆ ಸಖಿ ಸಂತೈಸಿಕೊ ಸಂತೈಸಿಕೊ.

ರಾಜ.—*ಕಂ ॥ ಎಲೆ ಭೀರುವೆ ಮೂಜಗವಂ ।
ಸಲಹುವ ಸುರಪತಿಯ ವೈಭವದಿಂದಸುರಭಯಂ ॥
ತೊಲಗಿದುದಿನ್ನು ಪದೆ ಮಡೆ ।
ತ್ವಲವಂ ಬಿಡುವಂತೆ ಬಿಸಿಜಿ ಕಣ್ಣಂ ಬಿಡುಸೀಂ ॥ ೫

ಚಿತ್ರ.—ಅಯ್ಯೋ! ಉಸುರಾಡುವದರಿಂದ ಮಾತ್ರ ಬದುಕಿರುವಂತೆ ಕಾಣುವಳು. ಇನ್ನೂ ಮೂರ್ಛೆ ತಿಳಿಯಲಿಲ್ಲ.

ರಾಜ.—ಈಕೆ ಬಹಳವಾಗಿ ಭಯಪಟ್ಟಿರಬಹುದು. ಯಾತಕ್ಕೆಂದರೆ—

ಕಂ॥ ಈ ರಮಣಿಯೆದೆಯೊಳೊಪ್ಪುವ ।
ಸೌರಭಯುತಮಾದ ಕಲ್ಪಸುಮಮಾಲಿಕೆಯಂ ॥
ಮಾರುತೆ ಸೂಚಿಸುಗುಂ ಸುರ ।
ವೈರಿಗಳಿಂದೊಗೆದ ಹೃದಯಭಯಕಂಪನಮಂ॥ ೬

---

*॥ ರಾಗ—ಮುಖಾರಿ ॥ ॥ ಆದಿತಾಳ ॥

ಏತಕಿಂತು ಮೂರ್ಛೆಯಾಂತೆ । ಭೀತಿಯೇನು ಕಾಂತೆ ॥ ಮಾತನಾಡು ಸುಂದರಿ । ಪ್ರೀತಿಯನ್ನು ತೋರಿ ॥ ೧ ॥ ಆ ಸುರೇಶಮೈತ್ರಿಯಿಂದ । ಕೇಶಿನಿಮಿಷದಿಂದ ॥ ನಾಶವಾಗಿ ಪೋದನು । ಕ್ಲೇಶಪಡುವದೇನು ॥ ೨ ॥ ತಾವರೆಯು ಬಿಚ್ಚಿಯುಷದಿ । ಪೂವಬಿಡುವ ಚಂದದಿ ॥ ಈ ವಿಶಾಲನೇತ್ರವನ್ನು । ಭಾವೆ ಬಿಡಿನ್ನು ॥ ೩ ॥

ಚಿತ್ರ.—ಎಲೆ ಸಖಿ ಮನಸ್ಸನ್ನು ಸಮಾಧಾನಪಡಿಸು. ನನ್ನ ಮನಸ್ಸಿಗೆ ನೀನು ಅಪ್ಸರಸ್ತ್ರೀಯಂತೆ ಕಾಣಿಸುವದಿಲ್ಲ.

ರಾಜಂ.—ಕಂ ॥ ಸುಮಕೋಮಲೆಯೆನಿಸಿರ್ಪ್ಪೀ ।
ರಮಣಿಯ ಹೃದಯಂ ಭಯಪ್ರಕಂಪಮನುಳಿದಿ ॥
ಲ್ಲ ಮೆನುತ್ತಂ ಸೂಚಿಸುವಂ ।
ತನುವಿನ ಸೀರೆಯ ಸೆರಂಗು ಪ್ರೋಚ್ಛ್ವಾಸದಿನ್ನುಂ ॥ ೭

(ಊರ್ವಶಿಗೆ ಸ್ವಲ್ಪಸ್ವಲ್ಪ ಮೂರ್ಛೆ ತಿಳಿಯುತ್ತಾ ಬರುವದು.)

ರಾಜಂ.—ಚಿತ್ರಲೇಖೆ ಇದೊ ನೋಡು ನಿನ್ನ ಸಖಿಗೆ ಮೂರ್ಛೆ ತಿಳಿಯುತ್ತಾ ಬರುವದು.

*ಸ್ರ॥ ಬಗೆಯೆ ಸುಧಾಮರೀಚಿತಮವಮಂ ಬಿಡುತಿರ್ಪ್ಪಿರುಳಿಂದದಿಂದೆ ಕ ।
ಬ್ಬೊರ್ಗ್ಗೆಗಳಿಯುತ್ತಮಿರ್ದ್ದಗ್ನಿ ಸಿಖಾಗ್ನಿಯು ಪೇರುರಿಯುಂದದಿಂತಟಂ
ಜಿಗುಳೆ ನಿಶಾಂತಕಲ್ಮಷತೆಯಾಂತ ಮಲತ್ವಮನಾಂಪ ಗಂಗೆವೊಲ್ ।
ಮೃಗಶಿಶುನೇತ್ರೆ ತಾಂ ಕಳೆದಪಳ್ ತರದಿಂತಳೆದಿರ್ದ್ದ ಮೂರ್ಛೆಯಂ ।

ಚಿತ್ರ.—ಎಲೆ ಸಖಿ ಇನ್ನು ಭಯವನ್ನು ಬಿಡು ದುರಾಶೆಪಡುತ್ತಿದ್ದ ದೇವ ಶತ್ರುಗಳೆಲ್ಲಾ ಹತರಾದರು.

ಊರ್ವ.—(ಕಣ್ಣುಬಿಟ್ಟು ನೋಡಿ) ಎಲೆ ಚಿತ್ರಲೇಖೆ ನಮ್ಮನ್ನು ಬಿಡಿಸಿ ಕರೆದುಕೊಂಡು ಬಂದವನು ದಿವ್ಯದೃಷ್ಟಿಯುಳ್ಳ ದೇವೇಂದ್ರನೊ?

ಚಿತ್ರ.—ದೇವೇಂದ್ರನಲ್ಲ, ದೇವೇಂದ್ರ ಸಖ್ಯಕನಾದ ಈ ರಾಜೇಂದ್ರ ಪುರೂರವನು.

---

*॥ ರಾಗ—ಹಿಂದುಸ್ಥಾನೀಕಾಪಿ । ॥ ಆದಿತಾಳ ॥

ತೋರುವದೇಸುಂದರ ॥ ಪ ॥ ಮೀರಿದಮೂರ್ಛ್ಛೆಯಾಕಳೆಯುತಲಿದೊ ॥ ಅ ॥ ಹಿಮಕರನುದಯಿಸೆ । ತಿಮಿರಾವರಣದ ॥ ಕ್ರಮದಿಂ ಬಿಡುತಿಹ ರಾತ್ರಿಯವೊಲ್ ॥ ೧ ॥ ಇರುಳೊಳಾಧೂಮ । ಸ್ತರದಹುಗೆಯನು ॥ ತೊರೆದಿರುವಗ್ನಿಯ ರೀತಿಯುಂದದಿ ॥ ೨ ॥ ಮಳೆಕಾಲದೊಳಿ । ದ್ದೆ ಕಲುಷತೆಯಾಂ ॥ ತೊರೆನದಿಯು ತಿಳಿಯುವಗಂಗೆಯವೊಲ್ ॥ ೩ ॥

ಊರ್ವ.—(ರಾಜನನ್ನು ನೋಡಿ ತನ್ನಲ್ಲಿತಾನು) ಆ ದೈತ್ಯನು ನನಗೆ ಮಾಡಿದ ಅಪಕಾರವೂ ಉಪಕಾರವಾಯಿತಲ್ಲವೆ?

ರಾಜ.—(ಊರ್ವಶಿಯನ್ನು ನೋಡಿ ತನ್ನಲ್ಲಿತಾನು) ಪೂರ್ವದಲ್ಲಿ ನಾರಾಯಣ ಮಹರ್ಷಿಯನ್ನು ಮೋಹಪಡಿಸುವದಕ್ಕೋಸ್ಕರ ಬಂದ ಅಪ್ಸರಸ್ತ್ರೀಯರೆಲ್ಲರೂ ಈಕೆಯನ್ನು ನೋಡಿ ಲಜ್ಜಿತರಾದದ್ದು ಯುಕ್ತ; ಅಥವಾ ಈಕೆಯನ್ನು ನೋಡಿದರೆ ಋಷಿಯಿಂದ ಹುಟ್ಟಿದಂತೆ ಕಾಣುವದಿಲ್ಲ; ಯಾತಕ್ಕೆಂದರೆ—

ವೃ|| ತಾರಗೆ ಯೊನ್ಮಾಸೀ ರಮಣೀಯಂ ನೆಗಳ್ದ ಕರ್ತೃ ಮುದಾರಕಾಂತಿಯಿಂ।
ದಾರಚಿಸಿ ಕರ್ತೃ ಮಲ್ಲದೊಡೆ ಚೈತ್ರನದಗ್ರ ಸುಮಂಗಳಾಂದೆ ಕೃಂ॥
ಗಾದದೆ ಮೇಣ್ಮಾನೋಜನೆಸಗಿ ಕರ್ತೃಗು ಮಲ್ಲದೆ ವೃದ್ಧ ತಾಪಸಂ।
ಕಾರಣನಂತೊಮಿಂದ ಜಡನೀ ಸೊಬಗಂ ಸೃಜಿಸಲ್ಕೆ ನಿಸ್ಪೃಹಂ॥ ೯

ಊರ್ವ.—ಚಿತ್ರಲೇಖೆ ನಮ್ಮ ಸಖೀಜನವೆಲ್ಲಿರುವದು?

ಚಿತ್ರ.—ಅದನ್ನು ಅಭಯಪ್ರದಾನಮಾಡಿದ ಮಹಾರಾಜನೇ ಬಲ್ಲನು.

ರಾಜ.—(ಊರ್ವಶಿಯನ್ನು ನೋಡಿ) ಆ ನಿನ್ನ ಸಖೀಜನವು ಅತ್ಯಂತದುಃಖದಲ್ಲಿರುವದು. ನೀನೇ ನೋಡು.

ಕಂ|| ಮೊನೆನ್ನೊವೆರ್ಕೆ ಕಂಡೆ ಜನಮುಂ।
ನಿನ್ನಂ ಕ್ಷಣಕಾಲವಾದೊಡಂ ಕಾಣದಿರಲ್॥
ತನ್ನಂ ಕಳವಳಪ್ಪುದೆನಲ್।
ನಿನ್ನೊಡನಾಡಿಗಳದೆಂತು ನಿನ್ನ ಗಳದಿ ಕರ್ತೃಗಂ॥ ೧೦

ಊರ್ವ.—(ಚಿತ್ರಲೇಖೆಯನ್ನು ನೋಡಿ) ಈತನ ಮಾತು ಶ್ಲಾಘ್ಯವಾದದ್ದು. ಚಂದ್ರನಿಂದ ಅಮೃತ ಹೊರಡುವದೇನಾಶ್ಚರ್ಯವೆ? (ಪ್ರಕಾಶವಾಗಿ) ಆದ್ದರಿಂದಲೇ ಅವರನ್ನು ನೋಡುವದಕ್ಕೆ ನನ್ನ ಮನಸ್ಸು ತ್ವರೆಪಡುತ್ತಿರುವದು.

ರಾಜಾ.—(ಕಯ್ಯಿಂದ ತೋರಿಸಿ) ಎಲೆ ಲತಾಂಗಿ—

*ಕಂ ॥ ರಾಹುವಿಮುಕ್ತ ಶರದಾ ।
ಶಾ ಹಿಮಕರನಂತೆ ತೋರ್ಪ ನಿನ್ನಯ ಮೊಗಮಂ ॥
ಈ ಹೇಮಕೂಟಗಿರಿಯೊಳ್ ।
ನೇಹಂ ಮಿಗೆ ನೋಡುತಿರ್ಪರಿದೊ ತವಸಖಿಯರ್ ॥ ೧೧

ಊರ್ವ.—(ರಾಜನನ್ನು ಅನುರಾಗದಿಂದ ನೋಡುವಳು).

ಚಿತ್ರ.—ಎಲೆ ಸಖಿ ನೀನು ನೋಡಲಿಲ್ಲವೆ ?

ಊರ್ವ.—ಯಾತಕ್ಕೆ ನೋಡದೆ ಇರುವೆನು ! ಸಮಾನವಾದ ಸುಖದುಃಖವುಳ್ಳ ಇಷ್ಟಜನವನ್ನು ನೋಡುತ್ತಲೇ ಇರುವೆನು.

ಚಿತ್ರ.—(ನಸುನಗುತ) ಯಾರನ್ನು ಹೇಳು ಹೇಳು.

ಊರ್ವ.—ಸಖೀಜನವನ್ನು.

ರಂಭೆ.—(ನೋಡಿ ಸಂತೋಷದಿಂದ) ಎಲೌ ಸಖಿಯರೆ, ಇದೊ ನೋಡಿ ನೋಡಿ, ಆ ಮಹಾರಾಜನು ಚಿತ್ರಲೇಖೆಯೊಡನೆ ನಮ್ಮ ಪ್ರಿಯಸಖಿಯಾದ ಊರ್ವಶಿಯನ್ನು ಕರೆದುಕೊಂಡು ವಿಶಾಖಾನಕ್ಷತ್ರದಬಳಿ ಸೇರಿದ ಚಂದ್ರನಂತೆ ಪ್ರಕಾಶಿಸುತ್ತಿರುವನು.

ಮೇನಕೆ.—(ಬಾಗಿಯೇ ನೋಡಿ) ಈ ರಾಯನು ನಮ್ಮ ಪ್ರಿಯಸಖಿಯನ್ನು ಬಿಡಿಸಿ ತಂದದ್ದೂ ತಾನೂ ನೋಡಲಿ ಬಂದದ್ದೂ ಇವೆರಡೂ ನಮಗೆ ಬಹಳ ಪ್ರಿಯವಾದದ್ದು.

ರಾಜಾ.—ಎಲೈ ಸೂತನೆ ಹೇಮಕೂಟಪರ್ವತದ ಸಮೀಪಕ್ಕೆ ಬಂದೆವು. ಮೆಲ್ಲನೆ ರಥವನ್ನು ಇಳಿಸು.

---

*॥ ರಾಗ—ಕನ್ನಡ ॥ ॥ ಅಟತಾಳ ॥

ಸಖಿಯರ ನೋಡೆಲೆ ಸುಂದರೀ । ನಿನ್ನ ॥ ಪ ॥ ದರಹಾಸದಿಂದಲಿ । ಮರುಗುತಿಹ ಪ್ರಿಯ ॥ ಬರುವಿಕೆಯನೆ ಹಾರೈಸುತಾ ॥ ೧ ॥ ತಮಂಗೆಯ ರಾಹುವಿ । ಟ್ಟಿರುವ ಚಂದಿರನಂತೆ ॥ ಮೆರೆವ ನಿನ್ನಾಸ್ಯವ ನೀಕ್ಷಿಸಾ ॥ ೨ ॥ ಈಗಿರುತ್ಪಂಗೆಯು । ಭೂಗದ ಬಂಗಾರ ಸೊಗಯಿಸಿದ ಲತೆಗಳಂತಿರಾ ॥ ೩ ॥

ಸೂತಂ.—ಆಯುಷ್ಮಂತನ ಅಪ್ಪಣೆಯಾದಂತೆ. (ಎಂದು ರಥವನ್ನು ಇಳಿಸುವನು)

ರಾಜಂ.—(ಚಕ್ರದುಡುಗಿದ್ದನ್ನು ನೋಡಿ)

ಕಂ ॥ ಮನಸಿಜನಿಂದಮೊದ್ರುಷ್ಟದ ।
ಘನ ರೋಮಾಂಚಪ್ರಪಂಚದಿಂ ಶರಮೊಳ್ಪಿರ್ದ್ದ ।
ವನಿತಾಮಣಿಯಭುಜಾಗ್ರದ ।
ಮೊನತ್ತು ಭುಜಶಿರದೊಳ್ ಪಳಂಚಿದುದಹಹಾ ॥ ೧೨

ಊರ್ವ.—ಎಲೆ ಸಖಿ ಸ್ವಲ್ಪ ಅತ್ತ ಸರಿ.

ಚಿತ್ರ.—ಇಲ್ಲಿ ಅವಕಾಶವಿಲ್ಲವಲ್ಲಾ !

ರಂಭೆ.—ಎಲೌ ಸಖಿಯರೆ, ನಮ್ಮ ಸಖಿಯನ್ನು ಬಿಡಿಸಿಕೊಂಡು ಬಂದ ಈ ರಾಜರ್ಷಿಯನ್ನು ಮರ್ಯಾದೆಯಿಂದ ಕಾಣೋಣ ಬನ್ನಿ ಬನ್ನಿ.

ಎಲ್ಲರೂ.—ಒಳ್ಳೇದು ಹಾಗಾಗಲಿ (ಎಂದು ಸಮೀಪಕ್ಕೆ ಬರುವರು.)

ರಾಜಂ.—ಕಂ ॥ ತಡೆರಥಮಂಸೂತನೆ ಸೊ ।
ಗಡಿಸುವವೊಲ್ ಚೈತ್ರಲಕ್ಷ್ಮಿವಲ್ಲಿಗಳಂತಾ ॥
ನೊಡಗೊಡುವನ್ನ ಪರಮಿಮಾ ।
ಮೃದಿಕಟಂಗಿಪ್ಪರ್ ತನ್ನ ಕೆಳದಿಯರಿಂದಂ ॥ ೧೩

ಸೂತಂ.—ಅಪ್ಪಣೆ. (ಎಂದು ರಥವನ್ನು ನಿಲ್ಲಿಸುವನು).

ಅಪ್ಸ.—ಎಲೈ ಮಹಾರಾಜನೆ ದೈವಯೋಗದಿಂದ ಜಯವನ್ನು ಹೊಂದಿ ವರ್ಧಿಸುವೆಯು ?

ರಾಜಂ.—ನಿಮ್ಮ ಸಖಿಯು ಸಮಾಗಮದಿಂದ ನಿಮಗೂ ಅಭ್ಯುದಯವೆ ?

ಊರ್ವ.—(ಚಿತ್ರಲೇಖೆಯ ಹಸ್ತಾವಲಂಬನದಿಂದಿಳಿದು) ಎಲೌ ಸಖಿಯರೆ ನೀವೆಲ್ಲರೂ ನನ್ನನ್ನು ದೃಢವಾಗಿ ಬಂದೀಕಾಲದಲ್ಲಿ ಆಲಿಂಗಿಸಿ. ನನಗೆ ಪುನಃ ನಿಮ್ಮನ್ನು ನೋಡುತ್ತೇನೆಂಬ ಪ್ರತ್ಯಾಶೆ ಇರಲಿಲ್ಲ.

(ಸಖಿಯರು ಆಲಿಂಗಿಸುವರು).

*ಮೇನಕೆ.—ಈ ಮಹಾರಾಜನು ಬಹುಕಾಲ ಭೂಮಿಯನ್ನು ಪಾಲಿಸಲಿ.

ಸೂತಂ.—ಮಹಾರಾಜನೆ ಪೂರ್ವದಿಕ್ಕಿನಿಂದ ಯಾವದೋ ಒಂದು ರಥವು ಬರುವಂತೆ ಕಾಣುತ್ತೆ ; ಇದೋ ನೋಡು—

†ಕಂ ॥ ತಳೆದುಭುಜವಲ್ಲಿಮಿಸುನಿಯ |
ತೊಳತೊಳಗುವಬಾಹುಪೂರವೆಂಬವದಿಂದಂ ॥
ನೆಳೆಮಿಂಚುವೆರೆದಮುಗಿಲಂ |
ತಿಳದೀ ಶೈಲಾಗ್ರದಿಂದೆ ಬಪ್ಪಗನೆರೊಬ್ಬಂ ॥ ೧೪

ಅಪ್ಸ.—(ನೋಡಿ) ಓಹೋ ! ಇದೇನು ಚಿತ್ರರಥ ಬಂದ !

ಚಿತ್ರರಥಂ.—(ಪ್ರವೇಶಿಸಿ ರಾಜನಿದಿರಾಗಿನಿಂತು) ಎಲೈ ಮಹೇಂದ್ರನಿಗೂ ಉಪಕಾರಮಾಡತಕ್ಕ ಸಾಮರ್ಥ್ಯವುಳ್ಳ ಪುರೂರವನೆ ನಿನಗೆ ಕುಶಲವೆ ?

ರಾಜಂ.—ಓಹೋ ! ಇದೇನು ಗಂಧರ್ವರಾಜ ! (ಎಂದು ರಥದಿಂದಿಳಿದು) ಪ್ರಿಯಮಿತ್ರನೆ ನಿನಗೆ ಸುಖಾಗಮನವೆ ?

(ಎಂದು ಪರಸ್ಪರ ಹಸ್ತಸ್ಪರ್ಶ ಮಾಡುವರು).

---

*॥ ರಾಗ—ಸಿಂಧುಮಂದಾರಿ ॥ ॥ ಆದಿತಾಳ ॥

ಬಹುಕಾಲನೀನಿರು ಭೂಪತಿ । ಮಹನೀಯಶೌರ್ಯ ಮಹಾಮತಿ ॥ ಪ ॥ ತುಹಿನಾಂಶುಕುಲಾಂಬುಧಿಚಂದ್ರನೆ । ನಿಹತಾರಿಸದ್ಗುಣಸಾಂದ್ರನೆ ॥ ಅ ॥ ಸುರಲೋಕವೈರಿಯಕೇಶಿಯ । ಪರಿಹಾರಗೈದುಮಹಾಶಯ । ಕರುಣಾಶ್ರಯನಮ್ಮಯಮಿತ್ರೆಯ । ಕರತಂದನೀರಜನೇತ್ರೆಯ ॥ ೧ ॥ ಕುಜವಿಲ್ಲನಂತತಿರೂಪನಂ । ಪಡೆದಿಂತುಸದ್ಗುಣಪುತ್ರನಂ । ಒಡಗೂಡಿಚಿರಂನಿಜಪತ್ನಿಯಂ । ಕಡುರಾಗದಿಂಪೊರೆಭೂಮಿಯಂ ॥ ೨ ॥ ಸಕಲಲೋಕಪಾಲನಧೀರನೆ । ಶತಪತ್ರಬಾಂಧವತೇಜನೆ । ಕ್ಷಿತಿನಾಕಪಾತಾಳದಂಮಿಗೆ । ನುತಕೀರ್ತಿನಿನ್ನದುಸಾರುಗೆ ॥ ೩ ॥

†॥ ರಾಗ—ಶಂಕರಾಭರಣ—ನೋಟು ॥ ॥ ಏಕತಾಳ ॥

ಆಗಸದಿಂದತಿ । ವೇಗದಮೇಲಿಮುದ । ದಾಗಿಪರಿಕಿಸುವ ಕಾಂತೆಯರೊಳು ॥ ಈಗರಿವೆಶೃಂಗವಿ । ಭಾಗವಬೆಳಗುತ । ಬೇಗಬರುತ್ತಿಹನಿವನಾರೈ ॥ ೧ ॥ ತಳೆದಸಿತ್ನಾನೆಭುಜ । ದೊಳುಮಿಸುನಿಯ ಥಳ । ಥಳಿಸುವಭುಜಕೀರ್ತಿಯತಳೆದು ॥ ತೊಳಗುವವಿಮಾನವನು । ತಳೆದಿಹನೊಬ್ಬನು । ಕೆಳಗಿಳಿದೈತರುತಂದಪನೆ ॥ ೨ ॥

ಚಿತ್ರ.—ಎಲೈ ಪ್ರಿಯಮಿತ್ರನೆ ಕೇಶಿಯೆಂಬ ದಾನವನು ಊರ್ವಶಿಯನ್ನು ಅಪಹರಿಸಿಕೊಂಡು ಹೋದ ಸಂಗತಿಯನ್ನು ಇಂದ್ರನು ನಾರದರ ಮುಖದಿಂದ ತಿಳಿದು ಆಕೆಯನ್ನು ಬಿಡಿಸಿಕೊಂಡು ಬರುವದಕ್ಕೋಸ್ಕರ ಗಂಧರ್ವಸೇನೆಗಾಜ್ಞಾಪಿಸಿದನು. ಬಳಿಕ ಸೇನಾಸಮೇತನಾಗಿ ಬರುತ್ತಿದ್ದನಾನು ಚಾರಣರ ಮುಖದಿಂದ ನಿನ್ನ ವಿಜಯವನ್ನು ಕೇಳಿ ಇಲ್ಲಿಗೆ ಬಂದೆನು.

ಇನ್ನು ಈಕೆಯನ್ನು ಕರದುಕೊಂಡು ನಮ್ಮೊಡನೆ ಬಾ ಮಹೇಂದ್ರ ದರ್ಶನಕ್ಕೆ ಹೋಗೋಣ. ನೀನು ನಮ್ಮ ಮಹೇಂದ್ರನ ವಿಷಯದಲ್ಲಿ ಅತ್ಯಂತ ಉಪಕಾರವನ್ನು ಮಾಡಿದೆ ; ನೋಡು—

ಕಂ ॥ ನಾರಾಯಣಮುನಿ ಮುಂಬಲ ।
ವೈರಿಗೆ ಸೃಜಿಸಿತ್ತ ನೀಮನೋಹಾರಿಣಿಯಂ ॥
ಸ್ವಾರಾಜಮಿತ್ರ ನೀಂದೇ ।
ವಾರಿಯನೆರೆ ಬಿಡಿಸಿತಂದು ಸಾಂಪ್ರತಮಿತ್ತಯ್ ॥ ೧೪

ರಾಜಂ.—ಎಲೈ ಚಿತ್ರರಥನೆ ನೀನು ಹಾಗೆನ್ನಕೂಡದು ;—

ಕಂ ॥ ಸುರನಾಥನಪಕ್ಷದೊಳ್ ।
ಪ್ಪರಸಕ್ಕಗಳವಿಜಯಮೆಂಬುದಿಂದ್ರನದಕ್ಕುಂ ॥
ಗಿರಿಗುಹೆಯೊಳ್ಮೊಳಗುವ ಕೇ ।
ಸರಿರವಮುಂಸೀಳ್ವುದಲ್ತೆ ಸೊಕ್ಕಾನೆಗಳಂ ॥ ೧೫

ಚಿತ್ರ.—ನೀನು ಹೇಳಿದ್ದು ಸಹಜ, ಪರಾಕ್ರಮಕ್ಕೆ ಅಹಂಕಾರವಿಲ್ಲದಿರುವದೇ ಭೂಷಣ.

ರಾಜಂ.—ಮಿತ್ರನೆ ಮಹೇಂದ್ರನ ದರ್ಶನಕ್ಕೆ ಈಗ ನಾನು ಬರತಕ್ಕದ್ದಲ್ಲ. ಈಕೆಯನ್ನು ನೀನೇ ಆತನ ಸನ್ನಿಧಿಗೆ ಕರದುಕೊಂಡು ಹೋಗು.

ಚಿತ್ರ.—ನಿನ್ನಿಷ್ಟವಿದ್ದಂತಾಗಲಿ. ಎಲೌ ಮಂಗಳಾಂಗಿಯರೆ ಇನ್ನು ನೀವೆಲ್ಲರೂ ಹೊರಡತಕ್ಕದ್ದು.

(ಅಪ್ಸರಸ್ತ್ರೀಯರೆಲ್ಲರೂ ಹೊರಟರು).

ಊರ್ವ.—(ಚಿತ್ರಲೇಖೆಯೊಡನೆ) ಎಲೆ ಸಖಿ ನಮಗೆ ಮಹೋಪಕಾರ ಮಾಡಿದ ಈ ರಾಜರ್ಷಿಯನ್ನು ಮಾತನಾಡಿಸುವದಕ್ಕೆ ಲಜ್ಜೆಪಡುವೆನು. ಆದ್ದರಿಂದ ನನ್ನ ಮಾತನ್ನು ನೀನೇ ತಿಳಿಸು.

ಚಿತ್ರ.—(ರಾಯನಬಳಿಗೆ ಬಂದು) ಪ್ರಿಯಮಿತ್ರನೆ ಊರ್ವಶಿಯು ನೀನು ಸಮ್ಮತಿಸಿದರೆ ನಿನ್ನ ಕೀರ್ತಿಯೊಡನೆ ಮಹೇಂದ್ರಲೋಕಕ್ಕೆ ಹೋಗಿ ಬರುವೆನೆಂದು ಬಿನ್ನೈಸುವಳು.

ರಾಜಂ—ಹೋಗಿ ಬರಲಿ; ಮತ್ತೊಂದುವೇಳೆ ನೋಡುವೆನು.

(ಅಪ್ಸರಸ್ತ್ರೀಯರೆಲ್ಲರೂ ಚಿತ್ರರಥನೊಡನೆ ಆಕಾಶಗಮನವನ್ನು ನಟಿಸುವರು).

ಊರ್ವ.—(ಮೇಲಕ್ಕೆ ಹೋಗುವಾಗ ಗತಿಭಂಗವನ್ನು ನಟಿಸಿ) ಓಹೋ! ಈ ಬಳ್ಳಿಯ ಕವಲಿಗೆ ನನ್ನ ಮುತ್ತಿನಮಾಲೆ ಸಿಕ್ಕಿಕೊಂಡಿತು.

(ಎಂದು ನೆವದಿಂದ ಸ್ವಲ್ಪ ತಿರುಗಿ ರಾಯನನ್ನು ನೋಡುತ್ತಾ)

ಚಿತ್ರಲೇಖೆ ಇದನ್ನು ಸ್ವಲ್ಪ ಬಿಡಿಸು.

ಚಿತ್ರ.—(ನೋಡಿನಕ್ಕು) ಬಲವಾಗಿ ಸಿಕ್ಕಿಕೊಂಡಿದೆ ಬಿಡಿಸುವದಕ್ಕಾಗುವದಿಲ್ಲ.

ಊರ್ವ.—ಹಾಸ್ಯ ಹಾಗಿರಲಿ; ಬಿಡಿಸು ಬಿಡಿಸು.

ಚಿತ್ರ.—ಆಗಲಿ ಬಿಡಿಸುವೆನು.

ಊರ್ವ.—(ರಾಯನನ್ನು ನೋಡಿ ಚಿತ್ರಲೇಖೆಯನ್ನು ಕುರಿತು) ಈಗ ನೀನು ಆಡಿದ ಮಾತನ್ನು ಮರೆಯದಿರು.

(ಚಿತ್ರಲೇಖೆ ಬಿಡಿಸುವದನ್ನು ನಟಿಸುವಳು).

ರಾಜಂ.—(ಲತೆಯನ್ನು ನೋಡಿ)

ಕಂ ॥ ಅಸಿಯಳ್ಕೊಂಕಿದಬಟ್ಟೆಯು ।
ನಸುತಿರುಗಿದಮೊಗಮನಿನ್ನ ದೊಮ್ಮೆಱಯುಮಾನೀ ॥
ಕ್ಷಿಸಲೀಕೆಯುಗಮನಕ್ಕೈದ ।
ಲೆಸಗುತೆನಿಂಬಳ್ಳಿಯೆನಗೊಡಕ್ಕೆಱದೆಸಿತಮಂ ॥

ಸೂತಂ.—ಆಯುಷ್ಮಂತನೆ—

ಕಂ ॥ ಕೆಡಹಿಸುರಗ್ಗಣವರಾಧವ ।
ನೊಡೆಚ್ಚಿದಾಪಕ್ಷಸಕ್ಕರ್ಗಳಂ ಜಲನಿಧಿಯೊಳ್ ॥
ಅಡಗಿತುನಿನ್ನಸಿಲಾಸ್ತ್ರದಿ ।
ದೊಡನೆಬಿಲಂಬೊಕ್ಕಪಾವಿನಂತಿರೆಕೊಳೆಯೊಳ್ ॥ ೧೮

ರಾಜಂ.—ಒಳ್ಳೇದು ಇನ್ನು ರಥವನ್ನು ಸಿದ್ಧಮಾಡು ; ಇದೋ ಬಂದೆನು.

ಸೂತಂ.—ಆಯುಷ್ಮಂತನಪ್ಪಣೆಯಾದಂತಾಗಲಿ.

( ಎಂದು ರಥವನ್ನು ಸಿದ್ಧಪಡಿಸುವನು ).

ಊರ್ವ.—( ರಾಯನನ್ನು ನೋಡಿ ಬಿಸುಸುಯ್ಯುತ್ತ ಸಖಿಯರೊಡನೆ ಹೋಗುವಳು)

ರಾಜಂ.—(ಊರ್ವಶೀಮಾರ್ಗವನ್ನೇ ನೋಡುತ್ತ ಕನ್ನಲ್ಲಿಸಿ) ನನ್ನ ಮನಸ್ಸು ದುರ್ಲಭವಾದ ವಸ್ತುವನ್ನು ಅಪೇಕ್ಷಿಸುತ್ತಿರುವದು.

*ಕಂ ॥ ತೆರಳುತೆ ಗಗನದೊಳೀಸುಂ ।
ದರಿ ಯೆನ್ನೊಡಲಿಂದೆಮನವನೆಳೆವಳ್ಮುರಿದು ॥
ಸ್ಫುರದರವಿಂದಮೃಣಾಳಾಗ್ರದೆ ।
ನಿರುಕಿಸಲರಸಂಚೆಯೊಳಗಣೆಳೆಯಂಸೆಳೆವೋಲ್ ॥ ೧೯

(ಎಲ್ಲರೂ ಹೋಗುವರು).

---

*॥ ರಾಗ—ಬೆಹಾಗ್ ॥ ॥ ರೂಪಕತಾಳ ॥

ಎಂತುನಾನ್ಸೈರಿಸುವೆ । ಕಾಂತೆಯನಗಲಿರ್ದೆಂತಿರುವೆ ॥ ಪ ॥ ಕಂತುವಾಸ್ತ್ರತಾಂತನಾಗೆ ಚಿಂತೆಯಧಿಕವಾಗೆ ॥ ಅ ॥ ಮುರಿದಕಮಲನಾಳದೆಳೆಯು । ನಿರದೆಸೆಳೆವಹಂಸೆಯನ್ನೋಲ್ । ಅರಸಿಮನವನೇಳಿಸಿದಳ । ಪರಿಕೊಂಡುಪೋದಳೇ । ಎಂತು ॥ ೧ ॥ ಮದನನಾರಾಚದಂತೆ । ಚಪಲೆಕಣ್ಣದಿಟ್ಟಿಯು । ಹೃದಯವಲ್ಲಿನೆಟ್ಟುಮನದ । ಚೆದರಿಸುತಲಿಪೋದಳೆ । ನ್ನೆಂತು ॥ ೨ ॥ ರಾಜಸದ್ಮಕವದನೆದಂ । ತೇಜನಯನೆಯನ್ನನು । ವ್ಯಾಜದಿಂದಲೀಕ್ಷಿಸಿ ಸದ । ರಾಜಸಭೆಗೆಪೋದಳೇ । ಎಂತು ॥ ೩ ॥

ಪ್ರಥಮಾಂಕವು ಮುಗಿದುದು.



## ದ್ವಿತೀಯಾಂಕಂ.

(ಬಳಿಕ ವಿದೂಷಕನು ಪ್ರವೇಶಿಸುವನು).

ವಿದೂಷಕ.—ಓಹೋ! ಈಗೇನಮಾಡಲಿ! ಬ್ರಾಹ್ಮಣಾರ್ಥಕ್ಕೆ ಬಿಟ್ಟಿಕೊಂಡು ಎಲೆಯಮುಂದೆ ಕೂತುಕೊಂಡ ಬ್ರಾಹ್ಮಣನು ಚಪಲಪಡದ ಹಾಗೆ ತನ್ನ ನಾಲಿಗೆಯನ್ನು ಹ್ಯಾಗೆ ತಡೆದುಕೊಳ್ಳಲಾರನೋ ಹಾಗೆ ಜನ ಸಂಘದಲ್ಲಿ ರಾಜರಹಸ್ಯವನ್ನು ಹೊರಪಡಿಸದಹಾಗೆ ನನ್ನ ನಾಲಿಗೆಯನ್ನು ನಾನು ತಡೆದುಕೊಳ್ಳಲಾರೆ. ಆದ್ದರಿಂದ ನಮ್ಮ ಮಹಾರಾಜನು ಧರ್ಮಾಸನವನ್ನು ಬಿಟ್ಟು ಬರುವಪರ್ಯಂತರಕ್ಕೂ ನಿರ್ಜನವಾಗಿರುವ ವಿಮಾನಪ್ರತಿಚ್ಛಂದವೆಂಬ ಉಪ್ಪರಿಗೆಯಮೇಲಿರುವೆನು.

(ಎಂದು ಹೋಗಿ ನಿಲ್ಲುವನು).

ಚೇಟಿ.—(ಪ್ರವೇಶಿಸಿ) ಮಹಾರಾಜನು ಸೂರ್ಯೋಪಾಸನೆಯನ್ನು ಮಾಡಿಕೊಂಡು ಬಂದಾರಭ್ಯ ವ್ಯಾಕುಲನಾಗಿರುವನು. ಅದಕ್ಕೆ ಕಾರಣವನ್ನು ಆತನ ಮಿತ್ರನಾದ ಮಾಣವಕನಿಂದ ತಿಳಿದುಬರುವಂತೆ ಕಾಶೀರಾಜಪುತ್ರಿಯಾದ ಮಹಾದೇವಿಯು ನನಗಾಜ್ಞಾಪಿಸಿರುವಳು. ಈಗ ಆತನನ್ನು ಎಲ್ಲಿ ತಾನೇ ಕಾಣಲಿ! ಹ್ಯಾಗೆತಾನೇ ಅವನನ್ನು ವಂಚಿಸಿ ಆವಿಷಯವನ್ನು ತಿಳಿಯಲಿ! ಓಹೋ! ಗರಿಕೆಯಮೇಲೆ ಬಿದ್ದ ಮಂಜಿನಂತೆ ಆತನಲ್ಲಿ ರಾಜರಹಸ್ಯವು ಬಹುಕಾಲ ನಿಲ್ಲುವದಿಲ್ಲ. ಒಳ್ಳೇದು ಆತನನ್ನು ಹುಡುಕುವೆನು. (ಎಂದು ಅತ್ತಿತ್ತ ನೋಡಿ).

---

‖ ರಾಗ—ಹಿಂದುಸ್ಥಾನಿಕಾಪಿ ‖ [ತಂಗಂವಾಟು] ‖ ಏಕತಾಳ ‖

ಅರಸನ ಗುಟ್ಟನು । ನಮ್ಮಾ ಅರಸನ ಗುಟ್ಟನು । ಆರೊಳು ನಾಂಪೇಳ್ದ । ಲೋಕದ ಯುವತಿಯರ । ಕೆರಳಿಸಲು ಸೈರಿಸೆನು । ಮನದಲ್ಲಿರಿಸಲು ಸೈರಿಸೆನು ‖ ೧ ‖ ಎಡೆಯೊಳು ಮುಂಗಡೆ । ಬಡಿಸಿದ ಭಕ್ಷ್ಯವ । ತುಡುಕದೆ ಸಂಭ್ರಮವ । ಪಡುತಿಹ ವಿಪ್ರನ । ನಾಲಿಗೆಯಂತೆ । ಅರಸನಾಂ ನುಡಿಯದೆ ಸೈರಿಸೆನು ‖ ೨ ‖ ಕಡುಚಪಲರನು । ಮ್ಮ ಹಾಡು ದೇಹದ । ಬಡಿಸಿದಮಾತ್ರಯೊ । ಕಡೆಗುವದೇಹವ । ತಡೆದೆನು ಸಂಕಟವ । ನುಡಿವುದ ತಡೆದೆನು ಸಂಕಟವ ‖ ೩ ‖

ಇದೊ ಈ ಉಪ್ಪರಿಗೆಯ ನಡುವೆ ಚಿತ್ರದಲ್ಲಿ ಬರೆದ ಕೋತಿಯಂತೆ ಅಲ್ಲಾಡದೆ ಸುಮ್ಮನೆ ನಿಂತಿರುವನು. ಒಳ್ಳೇದು ಈತನಸಮೀಪಕ್ಕೆ ಹೋಗುವೆನು. (ಎಂದು ಸಮೀಪಕ್ಕೆ ಬಂದು) ಆರ್ಯನೆ ನಮಸ್ಕರಿಸುವೆನು (ಎಂದು ನಮಸ್ಕರಿಸುವಳು).

ವಿದೂ.—ನಿನಗೆ ಮಂಗಳವಾಗಲಿ. (ತನ್ನಲ್ಲಿ ತಾನು) ಇದೇನು! ಈ ದುಷ್ಟಳಾದ ಚೇಟಿಯನ್ನು ನೋಡಿದ ಕೂಡಲೆ ನಮ್ಮ ರಾಯನ ರಹಸ್ಯವು ನನ್ನ ಮನಸ್ಸನ್ನು ಭೇದಿಸಿಕೊಂಡು ತಾನಾಗಿ ಹೊರಕ್ಕೆ ಬರುತ್ತಲಿದೆ.
(ಪ್ರಕಾಶವಾಗಿ)
ಎಲೆ ನಿಪುಣಿಕೆ ಸಂಗೀತವ್ಯಾಸಂಗವನ್ನು ಬಿಟ್ಟು ಎಲ್ಲಿಗೆ ಹೊರಟೆ?

ಚೇಟಿ.—ಮಹಾದೇವಿಯ ಅಜ್ಞೆಯಿಂದ ನಿನ್ನನ್ನೇ ನೋಡುವದಕ್ಕೆ ಬಂದೆನು.

ವಿದೂ.—ಮಹಾದೇವಿ ಏನಾಜ್ಞಾಪಿಸಿರುವಳು?

ಚೇಟಿ.—ಯಾವಾಗಲೂ ಆಕೆಯಲ್ಲಿ ಅನುರಕ್ತನಾಗಿದ್ದ ಮಹಾರಾಜನು ಈಗ ಆಕೆಯನ್ನು ಲಕ್ಷ್ಯವಮಾಡದೆ ಇರುವನಂತೆ.

ವಿದೂ.—ಎಲೆ ನಿಪುಣಿಕೆ ಮಹಾದೇವಿಯ ವಿಷಯದಲ್ಲಿ ನಮ್ಮ ಮಹಾರಾಜನು ಆಚರಿಸಿದ ಪ್ರತಿಕೂಲವೇನು?

ಚೇಟಿ.—ನಿಮ್ಮ ಮಹಾರಾಜನು ಯಾವಸ್ತ್ರೀಯಲ್ಲಿ ಅನುರಕ್ತನಾಗಿರುವನೋ ಆಕೆಯ ಹೆಸರು ಹಿಡಿದು ನಮ್ಮ ಮಹಾದೇವಿಯನ್ನು ಕರೆದನು.

ವಿದೂ.—(ತನ್ನಲ್ಲಿತಾನು) ಆತನೇ ತನ್ನ ರಹಸ್ಯವನ್ನು ಬಹಿರಂಗಪಡಿಸಿದ ಮೇಲೆ ನನ್ನ ನಾಲಿಗೆಯನ್ನು ನಾನೇಕೆ ತಡೆದುಕೊಂಡಿರಲಿ. (ಪ್ರಕಾಶ) ಊರ್ವಶಿಯೆಂದು ಕರೆದನೊ? ಆ ಅಪ್ಸರಸ್ತ್ರೀಯನ್ನು ನೋಡಿದಾರಭ್ಯ ಮಹಾದೇವಿಯನ್ನು ಹಾಗಿರಲಿ; ಹುಚ್ಚು ಹಿಡಿದವನಂತೆ ನನ್ನನ್ನೂ ಬಹಳವಾಗಿ ಪೀಡಿಸುತ್ತಿರುವನು.

ಚೇಟಿ.—(ತನ್ನಲ್ಲಿತಾನು) ರಾಯನ ಗುಟ್ಟನ್ನು ಒಳ್ಳೇ ಉಪಾಯದಿಂದ ಭೇದಿಸಿ ತಿಳಿದೆನು. (ಪ್ರಕಾಶ) ಮಹಾದೇವಿಗೆ ಏನರಿಕೆಮಾಡಲಿ?

ವಿದೂ.—ಇನ್ನು ನಮ್ಮ ಕಾಶೀರಾಜಪುತ್ರಿಗೆ ಕಷ್ಟಬಂತು!

ರಾಜಂ.—ಎಲೈ ಮಾಣವಕನೆ, ನನ್ನ ರಹಸ್ಯವನ್ನು ನಿನ್ನಲ್ಲಿಯೇ ಇಟ್ಟಿದ್ದೀಯಾ?

ವಿದೂ.—(ತನ್ನಲ್ಲಿ ತಾನು) ಅಯ್ಯೋ! ತೊತ್ತಿನಮಗಳಾದ ಆ ಚೇಟಿಯು ನನ್ನನ್ನು ವಂಚಿಸಿದಳು. ಇಲ್ಲದಿದ್ದರೆ ನಮ್ಮ ಮಹಾರಾಜನು ನನ್ನನ್ನು ಹೀಗೆ ಕೇಳುತ್ತಿರಲಿಲ್ಲ.

ರಾಜಂ.—ಇದೇನು ಯಾತಕ್ಕೋಸ್ಕರ ಸುಮ್ಮನಿದ್ದೀಯೆ?

ವಿದೂ.—ಅಯ್ಯಾ ಮಹಾರಾಜನೆ, ನಿನ್ನ ಮಾತಿಗೂಕೂಡ ಉತ್ತರವನ್ನು ಕೊಡದಂತೆ ನನ್ನ ನಾಲಗೆಯನ್ನು ಭದ್ರಪಡಿಸಿಕೊಂಡಿರುವೆನು.

ರಾಜಂ.—ಹಾಗೆ ನೀನು ನಾಲಗೆಯನ್ನು ತಡೆದುಕೊಂಡಿರುವದು ಯುಕ್ತ. ಈಗ ನನ್ನ ಮನಸ್ಸನ್ನು ಯಾವತೆರದಿಂದ ವಿನೋದಪಡಿಸಲಿ? ಹೇಳು.

ವಿದೂ.—ಹಾಗಾದರೆ ಅಡಿಗೇಮನೆಗೆ ಹೋಗೋಣ ನಡೆ.

ರಾಜಂ.—ಅಲ್ಲೇನು?

ವಿದೂ.—ಅಲ್ಲೇನೆ? ಬೇಕಾದ ಭಕ್ಷ್ಯಭೋಜ್ಯಗಳನ್ನು ತುಂಬಿರುವ ಪಾತ್ರೆಗಳನ್ನು ನೋಡುತ್ತ ಮನಸ್ಸನ್ನು ವಿನೋದಪಡಿಸಬಹುದು.

ರಾಜಂ.—(ನಕ್ಕು) ಅಲ್ಲಿ ನಿನಗೆ ಬೇಕಾದ ವಸ್ತುಗಳು ದೊರೆಯುವದರಿಂದ ನಿನ್ನ ಮನಸ್ಸು ವಿನೋದಪಡಬಹುದು. ದುರ್ಲಭವಾದ ವಸ್ತುವನ್ನು ಅಪೇಕ್ಷಿಸುತ್ತಿರುವ ನನ್ನ ಮನಸ್ಸು ಹ್ಯಾಗೆ ವಿನೋದಪಟ್ಟೀತು?

ವಿದೂ.—ಪ್ರಾಣ್ಯಳಾದ ಆ ಊರ್ವಶಿಯು ದೃಷ್ಟಿಗೆ ನೀನು ಬಿದ್ದೇ ಇದ್ದೀಯವಷ್ಟೆ?

ರಾಜಂ.—ಅದರಿಂದೇನುಪ್ರಯೋಜನ?

ವಿದೂ.—ಅದೇಕೆ ಹಾಗೆ ಹೇಳುತ್ತೀಯೆ? ಅವಳು ನಿನಗೆ ದುರ್ಲಭಳೆಂದು ನಾನೆಣಿಸುವದಿಲ್ಲ.

ರಾಜಂ.—ನೀನು ಹೇಳಿದ್ದು ಪಕ್ಷಪಾತದ ಮಾತಾಗಿದೆ.

ವಿದೂ.—ನೀನು ಇಷ್ಟೆಲ್ಲಾ ಹೇಳುವದನ್ನು ನೋಡಿದರೆ ನನಗೂ ಕೇಳುವದಕ್ಕೆ ಕುತೂಹಲವುಂಟಾಗಿದೆ. ಹಾಗಾದರೇನು! ಅವಳ ರೂಪು ಅಂಥಾ ಸರ್ವೋತ್ತಮವಾದದ್ದೆ? ಅಥವಾ ನನ್ನ ರೂಪಿಗೆ ಸಮಾನವಾದದ್ದೊ?

ರಾಜಂ.—ಮಾಣವಕನೆ ಅವಳ ಅವಯವಗಳನ್ನು ಒಂದೊಂದಾಗಿ ವರ್ಣಿಸುವದು ಅಶಕ್ಯವು. ಆದ್ದರಿಂದ ಸಂಕ್ಷೇಪವಾಗಿ ಹೇಳುವೆನು ಕೇಳು.

*ಕಂ ॥ ಆಭರಣಕ್ಕಾಭರಣಂ ।
ಶೋಭಾವತಿ ಸಿಂಗರಕ್ಕೆ ಸಿಂಗರಮೆನಿಕುಂ ॥
ಈ ಭೂಮಿಯೊಳುಪಮಾನಕೆ ।
ಸೌಭಾಗ್ಯದಕಣಿ ಮನೋಜ್ಞ ಮಾನುಷಮಾನಂ ॥ ೭

ವಿದೂ.—ಆಹ! ಗಗನದಲ್ಲಿರುವ ಆ ಸ್ತ್ರೀಯನ್ನು ಅಪೇಕ್ಷಿಸುವ ನೀನೂ ಗಗನದಲ್ಲಿರುವ ಜಲಧಾರೆಯನ್ನೇ ಅಪೇಕ್ಷಿಸುವ ಚಾತಕಪಕ್ಷಿಯೂ ಇಬ್ಬರೂ ಒಂದೆ!

ರಾಜಂ.—ಮಿತ್ರನೆ ನಿರ್ಜನಸ್ಥಾನಹೊರತಾಗಿ ನನ್ನ ಮನಸ್ಸಿಗೆ ವಿನೋದಸ್ಥಾನವು ಬೇರೆ ಯಾವದೂ ಇಲ್ಲ. ಆದ್ದರಿಂದ ಪ್ರಮದವನಕ್ಕೆ ಹೋಗೋಣ ನಡೆ.

---

*ರಾಗ ॥ ಖರಹರಪ್ರಿಯ ॥ ॥ ರೂಪಕತಾಳ ॥

ಎಂತುವರ್ಣಿಪೆ । ನಾ ನೆಂತುವರ್ಣಿಪೆ ॥ ಪ ॥ ಕಂತುಸತಿಯು ನಿಂದಿಸುವಾ । ಕಾಂತಿಯು ರೂಪತಿಶಯವ ॥ ಅ ॥ ತೊಡಿಗೆಗಳಿಗೆ ತೊಡಿಗೆಯಾದ । ಕಡುಚೆಲುವಿಕೆಯನ್ನು ತಳೆದ ॥ ಬಿಡಿಸಮೂವಿನ ಚಂದ್ರಮುಖಿಯು । ಮಡದಿಮಣಿಯು ಚಂದಗತಿಯು ॥ ೧ ॥ ನಿರುಪಮಾನ ವಸ್ತುಗಳಿಗೆ । ನಿರುಪಮಾನ ವಸ್ತುವಾದ ॥ ಮದನಕರ ಕೃಪಾಣಿಯಾದ । ಮೃದುಳಮಧುರ ವಾಣಿಯಾ ॥ ೨ ॥ ಸಿಂಗರಕ್ಕೆ ಸಿಂಗರವಹ । ಭೃಂಗಚಿಕುರೆಯಾದ ಸಾ ॥ ರಂಗಶಿಶುನಯನೆಯಾದ । ಮಂಗಳಾಂಗಿಯನ್ನು ನಾನ । ದೆಂತುವರ್ಣಿಪೆ ॥ ೩ ॥

ವಿದೂ.—(ತನ್ನಲ್ಲಿತಾನು) ಇನ್ನೇನುಗತಿ! ಇವನಸಂಗಡ ಅರಣ್ಯರೋದನವನ್ನು ಮಾಡಬೇಕಾಗಿಬಂತು. (ಪ್ರಕಾಶ) ಈಕಡೆ ದಯಮಾಡಿಸಬೇಕು. (ಎಂದಿಬ್ಬರೂ ನಡೆದು) ಮಹಾರಾಜನೆ ಪ್ರಮದವನದಿಂದ ಪ್ರೇರಿತವಾದ ದಕ್ಷಿಣವಾಯುವು ಇದೋ ನಿನ್ನನ್ನು ಎದುರುಗೊಳ್ಳುತ್ತಿರುವದು.

ರಾಜಂ.—ಈ ವಾಯುವಿಗೆ ಈ ವಿಶೇಷಣವೊಪ್ಪುವದು.

ಕಂ॥ ಕುಸುಮಿತ ಮಾಧವಿಯೊಳ್ ವಿಹ।
ರಿಸುತಂ ನೇಹದೊಳೆ ಕುಂದವಲ್ಲಿಯ ನಾಲಿಂ॥
ಗಿಸುತಂ ದಾಕ್ಷಿಣ್ಯದೊಳಾ।
ಶ್ವಸನಂಸಿರಿಸುತಿರ್ಪುದೆ ಕಾಮಿಯಂತಿರೆ ತೋಳ್ಕರ್ಗಂ॥ ೪

ವಿದೂ.—ನಿನ್ನ ಮನೋಭಾವವೂ ಹೀಗೆಯೇ ಇರತಕ್ಕದ್ದು. (ಎಂದು ನಡೆದು) ಮಹಾರಾಜನೆ ಇದೇ ಪ್ರಮದವನವು.

ರಾಜಂ.—ಮಿತ್ರನೆ ನೀನು ಮುಂದೆನಡೆ. (ಇಬ್ಬರೂ ಪ್ರವೇಶಿಸುವರು)

ರಾಜಂ.—(ನೋಡಿ) ಮಿತ್ರನೆ ವಿರಹತಾಪವನ್ನು ಪರಿಹರಿಸಿಕೊಳ್ಳುವದಕ್ಕೋಸ್ಕರ ನಾನಿಲ್ಲಿಗೆ ಬಂದದ್ದು ಇನ್ನೂ ವಿರಹತಾಪ ಹೆಚ್ಚುವದಕ್ಕೆ ಕಾರಣವಾಯಿತು.

ಕಂ॥ ಕಳೆಯಲ್ಕತನುಜ್ವರದುಪ।
ಟಳಮಂ ಪ್ರಮದೋಪವನಕೆ ನಾಂ ಬಂದುದುಕೇಳ್॥
ಪೊಳೆಯಲ್ಲಿಬಿದ್ದ ಮನುಜಂ।
ಸೆಳವಿಗೆ ಮಗುಳ್ದಿದಿರೆ ವಸ್ವರ್ತತರನಾಯ್ತು ಕಟಾ॥ ೫

ವಿದೂ.—ಅದು ಹ್ಯಾಗೆ?

ರಾಜಂ.—ಕಂ॥ ಸುಲಭಮದಲ್ಲದವಸ್ತುವ।
ನೆಳಸೆನ್ನಂ ಮೊದಲೆ ಪಂಚಬಾಣಂ ತವಿಸಂ॥
ಮಲಯಾನಿಲನಿಂದಂ ಪ।
ಲ್ಲೆಳೆ ಯುದುರಿ ತಳತ್ತಾಮ್ರವನೀಕ್ಷಿಸಲಿನ್ನೆಂ॥ ೬

ವೆನು. ಅಲ್ಲಿ ಸ್ವಲ್ಪಹೊತ್ತು ಕುಳಿತು, ಪುಷ್ಪಯುಕ್ತವಾದ ಲತೆಗಳನ್ನು ನೋಡುತ್ತ, ಊರ್ವಶೀ ವಿರಹದಿಂದುಂಟಾದ ತಾಪವನ್ನು ಸ್ವಲ್ಪ ಪರಿಹಾರಮಾಡಿಕೊ.

ರಾಜ.—ಹಾಗಾಗಲಿ. (ಎಂದು ವಿದೂಷಕನೊಡನೆ ಕುಳಿತುಕೊಂಡು). (ನಿಟ್ಟುಸುರುಬಿಟ್ಟು)

ಕಂ ॥ ಆಲಲಿತಾಂಗಿಯರೂಪವ ।
ನಾಲೋಕಿಸಿದೆನ್ನದೃಷ್ಟಿನುಗ್ಗವಲಿದಿದು ॥
ನ್ನೀಲಿತಕುಸುಮಂಗಳಾದೊಡೆ ।
ವಿಸಾಲತೆಗಳ ನೋಡಿನಾಡೆನಲವಾಂತಪುದೇ ॥ ೮

ಆದ್ದರಿಂದ ನನ್ನ ಇಷ್ಟಸಿದ್ಧಿಯಾಗುವದಕ್ಕೆ ತಕ್ಕ ಉಪಾಯವನ್ನು ಯೋಚಿಸು.

ವಿದೂ.—(ನಕ್ಕು) ಸರಿಯೆ! ಅಹಲ್ಯಾ ಕಾಮುಕನಾದ ದೇವೇಂದ್ರನಿಗೂ ಊರ್ವಶೀಕಾಮುಕನಾದ ನಿನಗೂ ಪಾಪಪರಿಹಾರೋಪಾಯವನ್ನು ಚಿಂತಿಸತಕ್ಕವರು ಬುದ್ಧರೇ ಸರಿ!

ರಾಜ.—ಅತಿಸ್ನೇಹವೆಂಬುವದು ಅಸಾಧ್ಯವಾದ ಕಾರ್ಯಕ್ಕಾದರೂ ಮಾರ್ಗವನ್ನು ತೋರಿಸುವದಲ್ಲವೆ?

ವಿದೂ.—ಆಗಲಿ, ಯೋಚಿಸುತ್ತೇನೆ. ಆದರೆ ನೀನು ಸುಮ್ಮನೆ ಗೋಳಾಡುತ್ತ ನನ್ನ ಮನಸ್ಸನ್ನು ಕಳವಳ ಪಡಿಸಬೇಡ.

ರಾಜ.—(ಸಂತೋಷಭಾವವನ್ನು ನಟಿಸಿ ತನ್ನಲ್ಲಿ ತಾನು)

ವೃ ॥ ಆ ಕಾಂತೆ ಚಂದ್ರಮುಖಿ ದುರ್ಲಭೆಯಾಗಿತೋರ್ಕ್ಕೆ ।
ಮೀನಾಮುಕೆವೃನುಡಿಯುಲ್ಪದಿಬಾಗಿತೋರ್ಕ್ಕೆಂ ।
ಸ್ವಾಕಾಂಕ್ಷಿತಾರ್ಥನಿಮಿದಿರ್ದಪ್ರೋಜನ್ನಚಿತ್ತ ।
ಮಾಕಸ್ಮಿಕಪ್ರಮದಮಂತಳೆಯುತ್ತಮಿರ್ಕ್ಕುಂ ॥ ೯

(ಎಂದು ಸಾಭಿಲಾಷನಾಗಿರಲು, ಆಕಾಶಯಾನದಿಂದ ಊರ್ವಶೀ ಚಿತ್ರಲೇಖೆಯರು ಪ್ರವೇಶಿಸುವರು.)

ಚಿತ್ರ.—*ಎಲೆ ಸಖಿ ಊರ್ವಶಿ ನೀನು ನಿರ್ನಿಮಿತ್ತವಾಗಿ ಎಲ್ಲಿಗೆ ಹೊರಟೆ?

ಊರ್ವ.—ಎಲೆ ಚಿತ್ರಲೇಖೆ ಹೇಮಕೂಟಶಿಖರದಲ್ಲಿ ಒಂದು ಬಳ್ಳಿಯಕವಲಿಗೆ ನನ್ನ ಮುತ್ತಿನಮಾಲಿಕೆ ಸಿಕ್ಕಿಕೊಂಡಿರಲು, ಇದನ್ನು ಸ್ವಲ್ಪ ಬಿಡಿಸೆಂದು ನಿನಗೆ ನಾನು ಹೇಳಿದಾಗ ನೀನು ನನ್ನನ್ನು ಹಾಸ್ಯಮಾಡಲಿಲ್ಲವೆ? ಈಗ ಯಾತಕ್ಕೆ ಹೀಗೆಕೇಳುವೆ?

ಚಿತ್ರ—ಹಾಗಾದರೇನು ರಾಜರ್ಷಿಯಾದ ಆ ಪುರೂರವನ ಬಳಿಗೆ ಹೊರಟೆಯೊ?

ಊರ್ವ—ಹೌದು, ಇದು ಅದೇ ಪ್ರಯತ್ನ; ಆದರೆ ಈವಿಷಯದಲ್ಲಿ ಲಜ್ಜೆಯನ್ನು ವಹಿಸಿರುವೆನು.

ಚಿತ್ರ.—ಒಳ್ಳೇದು, ಮೊದಲು ಅಲ್ಲಿಗೆ ಯಾರನ್ನು ಕಳುಹಿಸಿರುವೆ?

ಊರ್ವ.—ಮನಸ್ಸನ್ನು ಕಳುಹಿಸಿದೇನೆ.

ಚಿತ್ರ.—ಚೆನ್ನಾಗಿ ಯೋಚಿಸಿದೆ. ಅಲ್ಲಿಗೆ ಹೋಗುವದಕ್ಕೆ ನಿನಗೆ ಅಪ್ಪಣೆಯನ್ನು ಕೊಟ್ಟವರು ಯಾರು?

ಊರ್ವ.—ಪೂಜ್ಯನಾದ ಮನ್ಮಥನು.

ಚಿತ್ರ—ಇದಕ್ಕೆ ಪ್ರತಿವಚನವಿಲ್ಲ.

---

*॥ ರಾಗ—ದೇವಗಾಂಧಾರಿ ॥ ॥ ಮಿಶ್ರಛಾಪು ॥

ಚಿತ್ರ.—ಬಿಸರುಹಮಂದಯಾನೆ । ಯಾಸಬ್ಜವದನೆ ॥ ಪ ॥ ಕಾರಣವಿಲ್ಲದೆ । ಸಾರುವೆಯೆಲ್ಲಿಗೆ । ನಾಚದೆಹಾಸದೆ ಪೇಳೆನಗೆ ॥ ೧ ॥

ಊರ್ವ.—ಹೇಮಕೂಟದಲತೆ । ಗೆಮಾಲೆಸಿಕ್ಕಿದೆ । ಬಿಡಿಸೆನುತುಸುರ್ದೆ ಪೇಳದನು ॥ ೨ ॥

ಚಿತ್ರ.—ತಿಳಿದೆನಂತಾದೊಡೆ । ಕಳದಿವಸಭೂಪನ । ಬಳಿಗೀಗಮಾಪ್ತದಿನೀನಡೆದೈ ॥ ೩ ॥

ಊರ್ವ.—ಎಲೆಕೆಳದಿ ನಾವು ಯೋಗಮಾರ್ಗದಲ್ಲಿ ಹೊರಟರೆ ದೈತ್ಯ ಬಾಧೆ ಮುಂತಾದ ಅಡ್ಡಿಯಿಲ್ಲದೆ ಅಲ್ಲಿಗೆ ತಲಪುವೆವು?

ಚಿತ್ರ.—ಯಾತಕ್ಕೆ ಹೀಗೆ ಅಳುಕುತ್ತೀಯೆ? ನಮಗೆ ದೇವಗುರುಗಳು ಉಪದೇಶಿಸಿರುವ ಅಪರಾಜಿತೆಯೆಂಬ ಶಿಖಾಬಂಧನ ವಿದ್ಯೆಯಿಂದ ನಾವೆಲ್ಲಿಹೋದಾಗ್ಯೂ ದೈತ್ಯರು ನಮ್ಮ ಗೋಜಿಗೆ ಬರಲಾರರಷ್ಟೆ?

ಊರ್ವ.—ಓಹೋ! ಹೌದು ಹೌದು, ಈಗ ನನ್ನ ಸ್ಮರಣೆಗೆ ಬಂತು ನಡೆ ಹೋಗೋಣ. (ಎಂದು ಸಿದ್ಧಮಾರ್ಗದಲ್ಲಿ ಸಂಚಾರವನ್ನು ನಟಿಸುವರು.)

ಚಿತ್ರ.—ಎಲೆ ಸಖಿ ಇದೊ ನೋಡು, *ಯಮುನಾ ಸಂಗಮದಿಂದ ಪಾವನವಾದ ಗಂಗಾನದಿಯಲ್ಲಿ ತನ್ನ ಸೌಂದರ್ಯವನ್ನು ನೋಡಿಕೊಳ್ಳುತ್ತಿದೆಯೋ ಎಂಬಂತೆ ತೋರುತ್ತಿರುವ ಪ್ರತಿಷ್ಠಾನನಗರಕ್ಕೆ. ಶಿರಾಭರಣಪ್ರಾಯವಾದ ಆ ರಾಜರ್ಷಿಯ ಅರಮನೆಗೆ ಬಂದೆವು.

ಊರ್ವ.—(ಕುತೂಹಲದಿಂದ ನೋಡಿ) ಇದನ್ನು ಸ್ಥಾನಾಂತರವನ್ನು ಹೊಂದಿದ ಸ್ವರ್ಗವೆಂದೇ ಹೇಳಬೇಕು. (ಯೋಚಿಸಿ) ಸಖಿ ನನ್ನ ವಿಪತ್ತನ್ನು ಪರಿಹಾರಮಾಡಿದ ಆ ಮಹಾರಾಜನು ಈಗೆಲ್ಲಿರಬಹುದು?

ಚಿತ್ರ.—ನಂದನವನಕ್ಕೆ ಸಮಾನವಾದ ಈ ಪ್ರಮದವನದಲ್ಲಿ ಇಳಿದು ವಿಚಾರಿಸಿ ತಿಳಿಯೋಣ ನಡೆ. (ಇಳಿಯುವರು).

ಚಿತ್ರ.—(ರಾಜನನ್ನು ನೋಡಿ ಸಂತೋಷದಿಂದ) ಎಲೆ ಊರ್ವಶಿ ಇದೋ ನೋಡು, ಆ ಮಹಾರಾಜನು ನಿನ್ನೊಡನೆ ಸೇರದೆ ಚಂದ್ರಿಕೆಯೊಡನೆ ಕೂಡದೆ ಇರುವ ಶುಕ್ಲಪಕ್ಷದ ಪಾಡ್ಯಮಿಯ ಚಂದ್ರನಂತೆ ಕಾಣುತ್ತಿರುವನು. ಆದರೆ ಆಗ್ಗೆ ಈಗ್ಗೆ ರೂಪದಲ್ಲಿ ಏನೋ ಸ್ವಲ್ಪ ವಿಶೇಷ ತೋರುತ್ತಿರುವದು.

---

* ॥ ರಾಗ—ಜಂಜೋಟಿ ॥ ॥ ಆದಿತಾಳ ॥

ರಾರಾಜಿಸುತಿಹ । ಅಬ್ಜಾಕ್ಷಪದವಿದು ॥ ಪ ॥ ಧರೆಗದ್ವಿತಂ । ಬಿರುದವಸುಕ್ಷ್ಮಾಪ್ರವರಂ । ಪರನರಪತಿವರ । ಶಿರದೊಳು ಮುಂಗಡೆ ॥ ೧ ॥ ತನ್ನಯುವರಾಜನಿ । ಯತ್ನದಿಂದೊಂದುವ । ಶಾಸ್ತ್ರವಿಚಾರ್ಲಿತಂ । ಚೆನ್ನಾಗಿ ನೋಳ್ಪರ್ಗೆ ॥ ೨ ॥ ಭೂಪ್ರಭೂಮೀಪ್ರತಿ । ಪ್ರಾಜ್ಞರ್ಶಿರೋಮಣಿ । ರೂಪವನಾದಿದನು ನಾ । ನೆಪ್ಪುಗಳಾವೆನು ॥ ೩ ॥

ಚಿತ್ರ.—ನೀನು ಹೇಳಿದ್ದು ಯುಕ್ತ.

ಊರ್ವ.—ನಾವು ಮಾಯಾಪ್ರಭಾವದಿಂದ ಯಾರಿಗೂ ಕಾಣಿಸಿಕೊಳ್ಳದೆ ನಿಂತು ನಿರ್ಜನವಾದ ಈ ಪ್ರದೇಶದಲ್ಲಿ ಮಿತ್ರನೊಡನೆ ಇರುವ ಈತನ ಮಾತುಗಳನ್ನು ಕೇಳೋಣ. (ಹಾಗೆ ನಿಲ್ಲುವರು).

ವಿದೂ.—ಮಹಾರಾಜನೆ, ದುರ್ಲಭಳಾದ ಆ ಸ್ತ್ರೀಯು ನಿನ್ನ ಕೈಸೇರುವಂತೆ ಒಂದುಪಾಯವನ್ನು ಯೋಚಿಸಿರುವೆನು.

(ರಾಜನು ಸುಮ್ಮನಿರುವನು.)

ಊರ್ವ.—ಇವನು ಚಿಂತಿಸತಕ್ಕ ಧನ್ಯಳಾದ ಸ್ತ್ರೀಯಾರು ?

ಚಿತ್ರ.—ಯಾತಕ್ಕೋಸ್ಕರ ಮಾನವರಂತೆ ನಟಿಸುವೆ ? ಪ್ರಭಾವದಿಂದ ತಿಳಿಯುವ ಶಕ್ತಿ ನಿನಗಿಲ್ಲವೆ ?

ಊರ್ವ.—ವಿರಹದಿಂದ ಮುಗ್ಧಳಾದ ನನಗೆ ಈಗ ಜಾಗ್ರತೆಯಾಗಿ ಪ್ರಭಾವದಿಂದ ತಿಳಿಯುವ ಶಕ್ತಿಯೂ ಇಲ್ಲ.

ವಿದೂ.—ಮಹಾರಾಜನೆ ನಾನೊಂದುಪಾಯವನ್ನು ಯೋಚಿಸಿರುವೆನೆಂದು ಆಗಲೇ ಹೇಳಲಿಲ್ಲವೆ ? ಯಾತಕ್ಕೋಸ್ಕರ ಅದನ್ನು ಕೇಳದೆ ಸುಮ್ಮನಿರುವೆ ?

ರಾಜ.—ಅದೇನು ಹೇಳು.

ವಿದೂ.—ಅದೇನೆ! ನಿದ್ರೆಮಾಡುತ ಆಕೆಯನ್ನು ಸ್ವಪ್ನದಲ್ಲಿ ಕಾಣುವದೊಂದು ; ಇಲ್ಲದೇಹೋದರೆ, ಆಕೆಯನ್ನು ಚಿತ್ರದಲ್ಲಿ ಬರೆದು ಹತ್ತಿರದಲ್ಲಿಟ್ಟುಕೊಂಡು ನೋಡುವದೊಂದು.

ಊರ್ವ.—ಎಲೆ ಮನಸ್ಸೆ ಸ್ವಲ್ಪ ಕಳವಳಪಡದಿರು.

ರಾಜ.—ನೀನು ಹೇಳಿದ್ದೆರಡೂ ಕೂಡುವದಿಲ್ಲ.

ವೃ॥ ಮನಸಿಜನುಗ್ರಬಾಣವೊಳಬ್ಬರಿಸೆ ಸಂತತವೆನ್ನ ಚಿತ್ತಮಂ ।
ಕನಸಿನೊಳಾದೊಡಂ ಪ್ರಿಯೆಯನೀಕ್ಷಿಪೆನೆಂದೊಡೆ ನಿದ್ರೆ ಬಾರದಾ ।
ಇನಿಯಳ ಭಾವಮಂ ಬರೆದು ಚಿತ್ರದೊಳೀಕ್ಷಿಪೆನೆಂದೊಡೆನ್ನ ಲೋ ।
ಚನಮನೆ ಮೀರಿ ಬರ್ಪ ಬಿಸುಗಂಬನಿ ತುಂಬಿದ ಮಾಣದಕ್ಕಟಾ ॥ ೧೦

ವಿದೂ.—ಅಯ್ಯೋ! ಆ ಊರ್ವಶಿ ನಿನ್ನ ಗೋಳಾಟವನ್ನು ಕೇಳಲಾರದೆ ತನ್ನ ಅನುರಾಗವನ್ನು ಸೂಚಿಸುವದಕ್ಕೆ ಈ ಭೂರ್ಜಪತ್ರವನ್ನು ಬರೆದು ಬಿಸಾಡಿದಳೋ ಏನೊ!

ರಾಜ.—ಶಿಷ್ಟಮನೋರಥವು ಯಾವ ಅಸಾಧ್ಯವಿಷಯದಲ್ಲಿತಾನೇ ಪ್ರವರ್ತಿಸಲಾರದು.

(ಭೂರ್ಜಪತ್ರವನ್ನು ತೆಗೆದುಕೊಂಡು ಓದಿ ಸಂತೋಷದಿಂದ)

ಮಿತ್ರನೆ ನಿನ್ನ ಊಹೆ ಸರಿಯಾದದ್ದು.

ವಿದೂ.—ಬ್ರಾಹ್ಮಣವಚನ ತಪ್ಪೀತೆ? ಒಳ್ಳೇದು ಇದರಲ್ಲಿ ಬರೆದಿರುವದನ್ನು ದಯವಿಟ್ಟು ಸ್ವಲ್ಪ ಓದು ಕೇಳೋಣ.

ಊರ್ವ.—ಚೆನ್ನಾಗಿ ಹೇಳಿದನು, ಈತನೀಗ ಬುದ್ಧಿಜಾಣ.

ರಾಜ.—ಮಿತ್ರನೇ ಕೇಳು. (ಪತ್ರಿಕೆಯನ್ನು ನೋಡುತ್ತ)

*ಕಂ ‖ ಎಂತರಿದಪೆನಾಂ ನಿನ್ನಂ ।
ಕಾಂತನೆನೀನಂತುಟೆನ್ನನರಿಯದೆಮನದೋ ‖
ಸ್ವಾಂತವಿಭಾವಿಸಿದೊಡೆ ಹಾ ।
ಚಿಂತಿಸಲರಿದೆನ್ನಮಂದಭಾಗ್ಯತೆಯೆನಿತೋ ‖ ೧೨ ‖

ಇಳೆಯೆಸಗ್ಗನೆ ನಂದನವನ ।
ದೊಳಗೆನ್ನತಲಿಂದೆಕಂದಿದಲರ್ಶಯನಂ ‖
ಜ್ವಾಳನನವ್ರೋಲೆಸುಚ್ಚುಗವಳೋ ।
ಮೆಳಪವನನುಮೆನ್ನತಾಪಮಂತಿಳಿದಿರ್ಕ್ಕುಂ ‖ ೧೩ ‖

---

*‖ ರಾಗ—ಜಂಗಲ ‖ ‖ ಏಕತಾಳ ‖

ಕಾಂತನೆನಿನ್ನೊಳದೆಂತನುರಾಗವ । ನಾಂತಳೆದಿಹೆನೀಗಳ್ ‖ ಅಂತೆನ್ನೊಳನೀನಾಂತನುರಾಗವ । ನಾಂತಿರೆಯೆನು ಮನದೊಳ್ ‖ ೧ ‖ ನಲ್ಲನೆ ಬಿಡಿಹರ ಪಲ್ಲವಮಿಸನ । ಪಲ್ಲಿಜಕಲ್ಪಲಹಾ । ಪಲ್ಲವತಲ್ಪದೆ ಟಲ್ಲವದೆನ್ನಯ । ಫುಲ್ಲಶರಾರ್ತ್ತಿಯನು ‖ ೨ ‖

ಊರ್ವ.—ಈಗ ಏನು ಹೇಳುವನೋ ! ನೋಡಬೇಕು.

ಚಿತ್ರ.—ಎಲೆ ಸಖಿ ವಿರಹದಿಂದ ತಾವರೇದಂಟಿನಂತೆ ಬೆಳ್ಳಗಿರುವ ಈತನ ಅಂಗಗಳನ್ನು ನೋಡಿದಮೇಲೆ ಮುಂದೆ ಹೇಳತಕ್ಕದ್ದು ತಿಳಿದೇ ಇದೆ.

ವಿದೂ.—ಎಲೈ ಮಹಾರಾಜನೆ ಹಸಿದಿರತಕ್ಕ ನನಗೆ ಸ್ವಸ್ತಿವಾಚನೆ ಸಿಕ್ಕಿದಂತೆ ದೈವಯೋಗದಿಂದ ನಿನ್ನ ಮನಸ್ಸಿನ ಸಮಾಧಾನಕ್ಕೆ ಕಾರಣವಾದ ಈ ಭೂರ್ಜಪತ್ರವು ನಿನಗೆ ಸಿಕ್ಕಿತು.

ರಾಜ.—ಇದು ಸಿಕ್ಕಿದ್ದರಿಂದ ನನ್ನ ಮನಸ್ಸಿಗೆ ಸಮಾಧಾನವೊಂದೇ ಅಲ್ಲ.

ಕಂ॥ ಇನಿಯಳ ಲಲಿತಾರ್ಥಸಮಂ ।
ಧನಮಾಲೇಖಂ ಸಮಾನಮನುರಾಗಕ್ಕೆನಿದ ।
ಕನಮಿದನೆನ್ನುವಿದನ್ನಾ ।
ನನೆಗಾವಮದಿರಾಕ್ಷಿಮುಖ್ತ ನಿಸ್ಸ್ಯಂತೆಸೆದಿಂ ॥

ಊರ್ವ.—ಈಗಲೀಗ ನಮ್ಮಿಬ್ಬರ ಅನುರಾಗವೂ ಸಮಾನವಾದದ್ದೆಂದು ತಿಳಿದುಬಂತು.—

ರಾಜ.—ಮಿತ್ರನೆ ನನ್ನ ಕೈಬೆವರಿಂದ ಆಕೆಯ ಸ್ವಹಸ್ತಾಕ್ಷರಗಳು ಅಳಿಸಿ ಹೋದಾವು. ಈ ಪತ್ರಿಕೆ ನಿನ್ನ ಕೈಯಲ್ಲಿರಲಿ.

ವಿದೂ.—(ಪತ್ರಿಕೆಯನ್ನು ತೆಗೆದುಕೊಂಡು) ಮಹಾರಾಜನೆ ಆ ಮಾನ್ಯಳಾದ ಊರ್ವಶಿಯು ನಿನ್ನ ಮನೋರಥವೆಂಬ ವೃಕ್ಷಕ್ಕೆ ಪುಷ್ಪವನ್ನು ಕಾಣಿಸಿ ಫಲವನ್ನು ತೋರಿಸುವದಕ್ಕೆ ಯಾತಕ್ಕೋಸ್ಕರ ಸಾವಕಾಶ ಮಾಡುವಳು ?

ಊರ್ವ.—ಎಲಗೆ ಚಿತ್ರಲೇಖೆ ಈತನನ್ನು ಸೇರುವದಕ್ಕೆ ಕಾತರಪಡುತ್ತಿರುವ ನನ್ನ ಮನಸ್ಸನ್ನು ಸಮಾಧಾನ ಪಡಿಸುವಷ್ಟರಲ್ಲಿ ನೀನು ಈತನ ಸಮೀಪಕ್ಕೆ ಹೋಗಿ ನನ್ನ ವಿಷಯದಲ್ಲಿ ಉಚಿತವಾದ ಮಾತುಗಳನ್ನಾಡು.

ಚಿತ್ರ.—ಹಾಗೇ ಆಗಲಿ. (ಎಂದು ರಾಜನ ಸಮೀಪಕ್ಕೆ ಬಂದು) ಎಲೈ ಮಹಾರಾಜನೆ ಜಯಶೀಲನಾಗು.

ವೃತ್ತ ॥ ಅರಮೋಕ್ಷಿರೋಮಣಿಯೊಳಂಬ್ಬಗವೊಂದನೆ ಬೀಳುತಿರ್ಪ್ಪೆನತ |
ತ್ಕಾರಣಮಪ್ಪ ಮದ್ವಿಷಮತಾಪವನೇತಕೆನೋಡದಿರ್ಪ್ಪೆಯಾ ॥
ಧಾರಣವಾದುದೆಮ್ಮ ಭಯದೊಳ್ಮ್ರಿಯಮುಮಜ್ಜಗನೆಮ್ಮನಿರ್ಪ್ಪರಂ |
ಸೇರಿಸಿತಪ್ಪಲೋಕದ ಮುಖಿತಂ ಘಟಿಸಲ್ಗದತಪ್ತಲೋಕದೊಳ್ ॥ ೧೬ ॥

ಚಿತ್ರ.—( ಊರ್ವಶಿಯು ಸಮೀಪಕ್ಕೆ ಬಂದು ) ಎಲೆ ಸಖಿ ಮನ್ಮಥನು ನಿನಗಿಂತಲೂ ನಿರ್ದಯನಾಗಿ ಈ ಮಹಾರಾಜನನ್ನು ಬಾಧಿಸುತ್ತಿರುವನು. ನಿನ್ನ ಪ್ರಿಯನಿಗೆ ನಾನು ದೂತಿಯಾಗಿರುವೆನು. ಬೇಗಬಾ.

ಊರ್ವ.—ಎಲೆ ಚಿತ್ರಲೇಖೆ ನೀನು ಸ್ವಲ್ಪವೂ ಯೋಚಿಸದೆ ಥಟ್ಟನೆ ನನ್ನನ್ನು ಬಿಟ್ಟು ಹೋಗಬಹುದೆ ?

ಚಿತ್ರ.—( ನಸುನಕ್ಕು ) ಇನ್ನು ಸ್ವಲ್ಪಹೊತ್ತು ಹೋಗಲಿ, ಆಮೇಲೆ ಯಾರನ್ನು ಯಾರು ಬಿಡುವರೊ ತನಗೇ ಗೊತ್ತಾಗುವದು. ಆದರೆ ರಾಜಮರ್ಯಾದೆಯನ್ನು ವಿಚಾರಿಸಬೇಡ.

ಊರ್ವ.—(ಲಜ್ಜೆಯಿಂದ ಬಂದು) ಮಹಾರಾಜನಿಗೆ ಜಯವಾಗಲಿ.

ರಾಜ.—( ಸಂತೋಷದಿಂದ )

ಕಂ ॥ ಸುರಪತಿಗಲ್ಲದೆ ಮಿಕ್ಕಿನ |
ನರಪತಿಗಳ್ಗುಚಿತಮಲ್ಲದೀಜಯಶಬ್ದಮಂ |
ತರುಣೀಮಣಿ ನೀನೆನಗುಂ |
ಚ್ಚರಿಸಿದಕಾರಣದಿನೆನಗೆಯೊಳಾಂಜಯದೆಂಬಾಲೀ ॥ ೧೭ ॥

ಚಿತ್ರ.—( ಲಜ್ಜೆಯಿಂದ ತಲೆಬಾಗಿದ ಊರ್ವಶಿಯು ಮುಖವನ್ನೆತ್ತುವಳು. )

ವಿದೂ.—ಮಹಾರಾಜನಿಗೆ ಪ್ರಿಯಮಿತ್ರನಾದ ಬ್ರಾಹ್ಮಣನಿಗೆ ಸ್ವಲ್ಪ ನಮಸ್ಕಾರ ಮಾಡಕೂಡದೆ ?

ಊರ್ವ.—( ನಸುನಕ್ಕು ನಮಸ್ಕರಿಸುವಳು. )

ವಿದೂ.—ಕಲ್ಯಾಣಮಸ್ತು ಕಲ್ಯಾಣಮಸ್ತು.

ರಾಜಾ.—(ನಿಟ್ಟುಸುರುಬಿಟ್ಟು) ಮಿತ್ರನೆ ಈಗ ನನ್ನ ಕಣ್ಣುಗಳು ವ್ಯರ್ಥ ವಾದವು.

ವಿದೂ.—(ಭೂರ್ಜಪತ್ರವನ್ನು ತೋರಿಸುವದಕ್ಕೆ ಯತ್ನಿಸಿ) ಮಹಾರಾಜನೆ ಭೂರ್ಜ (ಎಂದು ಅರ್ಧೋಕ್ತಿಯಲ್ಲಿ ತನ್ನಲ್ಲಿತಾನು) ಅಯ್ಯೊ! ನಾನು ಆ ಊರ್ವಶಿಯ ರೂಪಾತಿಶಯವನ್ನು ಆಶ್ಚರ್ಯಪಟ್ಟು ನೋಡುತ್ತಿದ್ದಾಗ ಆಭೂರ್ಜಪತ್ರ ವೆಲ್ಲೊ ನನ್ನ ಕಯ್ಯಿಂದ ತಪ್ಪಿಸಿಕೊಂಡು ಹೋಯಿತು. ನನಗೆ ಗೊತ್ತೇ ಆಗಲಿಲ್ಲ. ಅನ್ಯೋನ್ಯಗತಿ!

ರಾಜಾ.—ಏನೆಂದೆಯ್ಯಾ! ಏನೋ ಮಾತನಾಡುವದಕ್ಕೆ ಉಪಕ್ರಮಿಸಿದ ಹಾಗಿತ್ತು.

ವಿದೂ.—ನಾನು ಮಾತನಾಡುವದಕ್ಕುಪಕ್ರಮಿಸಿದ್ದೆ? ನೀನೇತಕ್ಕೆ ಸುಮ್ಮನೆ ನಿನ್ನ ಅಂಗಗಳನ್ನು ನಿಂದಿಸಿಕೊಳ್ಳುವೆ ನಿನ್ನ ದುಃಖವನ್ನು ಬಿಡು. ಆ ಊರ್ವಶಿ ನಿನ್ನಲ್ಲಿ ದೃಢವಾದ ಅನುರಾಗವುಳ್ಳವಳಾದ್ದರಿಂದ ಇಲ್ಲಿಂದ ಹೊರಟುಹೋದರೂ ಈ ಅನುಬಂಧವನ್ನು ಬಿಡತಕ್ಕವಳಲ್ಲವೆಂದು ಹೇಳುವದಕ್ಕೆ ಉಪಕ್ರಮಿಸಿದೆ.

ರಾಜಾ.—ನನ್ನಭಿಪ್ರಾಯವೂ ಇದೇ; ಕೇಳು.—

ಕಂ॥ ತನುವೆನ್ನದಲ್ಲದುದರಿಂ।
ವನಿತಾಮಣಿಪೋಗುತ್ತಿತ್ತಳೆಂ ನಿಜಮನವಂ॥
ಸ್ತನಕಂಪನದಿಂಸೂಚಿತ।
ಮೆನಿಸಿದನಿಟ್ಟುಸುರಿನೆನ್ನಕಟ್ಟೆಂತಳೆದಂ॥ ೯॥

ವಿದೂ.—(ತನ್ನಲ್ಲಿತಾನು) ಅಯ್ಯೊ ಈ ಮಹಾರಾಯ ಭೂರ್ಜಪತ್ರದ ಹೆಸರನ್ನೆಲ್ಲಿ ಎತ್ತುತ್ತಾನೋ ಎಂದು ನನಗೆ ದಿಗಿಲಾಗಿದೆ.

ರಾಜಾ.—ಮಿತ್ರನೆ ಈಗ ನನ್ನ ದೃಷ್ಟಿಯನ್ನು ಎಲ್ಲಿ ವಿನೋದ ಪಡಿಸಲಿ? (ಸ್ಮರಿಸಿಕೊಂಡು) ಆಹಾ! ಮರೆತಿದ್ದೆ; ಆ ಭೂರ್ಜಪತ್ರವನ್ನಾದರೂ ತೋರಿಸು.

ವಿದೂ.—(ವ್ಯಸನವನ್ನು ನಟಿಸಿ) ಅಯ್ಯೋ ! ಎಲ್ಲೂ ಕಾಣೆನಲ್ಲಾ ! (ಅತ್ತಿತ್ತ ನೋಡಿ) ಮಹಾರಾಜನೆ ಆ ಭೂಜಪತ್ರವು ದೇವಲೋಕದಿಂದ ಬಂದದ್ದಲ್ಲವೆ ? ಆದ್ದರಿಂದ ಆ ಊರ್ವಶೀದಾರಿಯನ್ನೇ ಹಿಡಿದುಕೊಂಡು ಹೋಗಿರಬಹುದು.

ರಾಜ.—ಮೂರ್ಖ ! ಎಲ್ಲಾ ಕೆಲಸಗಳಲ್ಲಿಯೂ ನೀನು ಅಜಾಗರೂಕನು, ಇತ್ತಲಾಗತ್ತಲಾಗಿ ಎಲ್ಲಿ ಬಿದ್ದಿರುವದೋ ಹುಡುಕೋಣ ನಡೆ.

(ಹುಡುಕುತ್ತ ಹೋಗುವರು)

(ಆಗ ಕಾಶೀರಾಜಪುತ್ರಿಯಾದ ಮಹಾರಾಣಿಯು ಪರಿಜನದೊಡನೆ ಪ್ರವೇಶಿಸುವಳು)

ರಾಣಿ.—ಎಲೆ ಚೇಟಿ ನಿಪುಣಿಕೆ ಆರ್ಯಪುತ್ರನು ಪೂಜ್ಯನಾದ ಮಾಣವಕನೊಡನೆ ಈ ಲತಾಮಂಟಪಕ್ಕೆ ಹೋಗಿದ್ದ ಹಾಗೆ ಹೇಳಿದೆಯಷ್ಟೆ ? ಆ ಮಾತು ನಿಜವೆ ?

ನಿಪು.—ನಾನೆಂದಾದರೂ ಮಹಾರಾಣಿಗೆ ಸುಳ್ಳುಮಾತನ್ನು ತಿಳಿಸುವದುಂಟೆ ?

ರಾಣಿ.—ಹಾಗಾದರೆ ಈ ಲತೆಯ ಮರೆಯಲ್ಲಿ ನಿಂತು ಆರ್ಯಪುತ್ರನು ಏನಾಲೋಚನೆ ಮಾಡುತ್ತಿರುವನೋ ಕೇಳೋಣ. ನೀನು ಹೇಳಿದ ಸಂಗತಿ ಹೌದೋ ಅಲ್ಲವೋ ಗೊತ್ತಾಗುವದು.

ನಿಪು.—ಮಹಾರಾಣಿಗೆ ತೋರಿದಂತಾಗಲಿ.

ರಾಣಿ—(ಸ್ವಲ್ಪನಡೆದು ಮುಂದೆನೋಡಿ) ನಿಪುಣಿಕೆ ಇದೇನು ! ನೂತನವಾದ ನಾರುಮಡಿಯು ಚೂರಿನಂತೆ ದಕ್ಷಿಣದಿಕ್ಕಿನ ಗಾಳಿಯಿಂದ ತೂರಿಕೊಂಡು ಬರುತ್ತಿರುವದು.

ನಿಪು.—ಇದು ಭೂಜಪತ್ರವು, ಗಾಳಿಮಗುಚಿದಾಗ ಇದರಲ್ಲೇನೋ ಬರೆದಿರುವಹಾಗೆ ಕಾಣುವದು. ಓಹೋ ! ಇದು ಮಹಾರಾಣಿಯ ಪಾದಾಭರಣಕ್ಕೆ ಬಂದು ತಗಲಿಕೊಂಡಿತು. (ಎಂದು ತೆಗೆದುಕೊಂಡು ಇದನ್ನು ಓದಬಹುದೆ ?

ರಾಣಿ.—ಅದೇನು ಓದು ನೋಡೋಣ ವಿರೋಧವಿಲ್ಲದಪಕ್ಷದಲ್ಲಿ ಕೇಳುವೆನು.

ನಿಪು.—(ತಾನೇ ಓದಿಕೊಂಡು) ಮಹಾರಾಣಿಯೆ ಇದು ಅದೇ ಸಂಗತಿಗೆ ಸಂಬಂಧಪಟ್ಟದ್ದು, ಊರ್ವಶಿಯು ಮಹಾರಾಜನಿಗೆ ಪದ್ಯರೂಪವಾಗಿ ಬರೆದು ಕಳುಹಿಸಿದ ಪತ್ರಿಕೆಯಂತೆ ಕಾಣುತ್ತೆ. ಮಾಣವಕನ ಪ್ರಮಾದದಿಂದ ಅದೆಲ್ಲಾ ತಪ್ಪಿಸಿಕೊಂಡುಬಂದು ನಮ್ಮ ಕೈ ಸೇರಿತು.

ರಾಣಿ.—ಹಾಗಾದರೆ ಓದು ಆಕೆಯೇನು ಬರದಿರುವಳೊ ನೋಡೋಣ.

ನಿಪು.—ಅಪ್ಪಣೆ. (ಎಂದು ಎರಡು ಪದ್ಯಗಳನ್ನು ಓದುವಳು).

ರಾಣಿ.—(ಕೇಳಿ) ನಿಪುಣಿಕೆ ಇದನ್ನೇ ಕೈಗಾಣಿಕೆಯಾಗಿ ತೆಗೆದುಕೊಂಡು ಹೋಗಿ ಅಪ್ಸರಸ್ತ್ರೀ ಕಾಮುಕನಾದ ಆರ್ಯಪುತ್ರನನ್ನು ನೋಡೋಣ ನಡೆ.

ನಿಪು.—ಮಹಾರಾಣಿಯ ಅಪ್ಪಣೆಯಾದಂತಾಗಲಿ.

(ಎಂದು ಆ ಲತಾಮಂಟಪವನ್ನು ಬಿಡುವರು).



ವಿದೂ.—ಮಹಾರಾಜನೆ ಈ ಪ್ರಮೋದವನದ ಮಂದಮಾರುತನು ಆ ಭೂರ್ಜಪತ್ರವನ್ನು ತೆಗೆದುಕೊಂಡು ಹೋಗಿ ಈ ಕ್ರೀಡಾಪರ್ವತವನ್ನು ಸೇರಿರಬಹುದು.

ರಾಜ.—ಎಲೈ ಪ್ರಾಜ್ಞನಾದ—

*ವೃತ್ತ॥ ಮಲಯಸಮೀರಚೈತ್ರಸಹಿತಂ ನರುಗಂಪಿಗೆಕೊಂಡುಪೋ[illegible]।
ವ್ಮಲಕ್ಷ್ಮಿಯಿಂಫಲಂನಿನಗದೇಂಮಮಕಾಂತೆಯರಾಗಲೇಂಬಯಿಂ ॥
ಪಲಬಿನದಂಗಳಿಂದಸುಮನೀಂಪರಿರಕ್ಷಿಸಿಕೊಳ್ಳುತಿಪ್ಪ ರಾಕಾ ।
ಜಲಗಳನಿಂತುಭಂಗಿಪ್ಪುದುತಕ್ಕುದೆಹೇಳ್ಳನಗಂಬಾಪ್ರಿಯಾ ।೨೦॥

---

*॥ರಾಗ—ಜೆರಾಗ್॥ ॥ಆದಿತಾಳ॥

ತೋರಿಸು ಕಾಂತಾಲೇಖವನ್ನು ॥ಪ॥ ಮಾರುತಪ್ರೋತನೆ ಸೈರಿಸಲಾರೆನೆ ॥ಅ॥ ನಿನಗದರಿಂದೇಂಫಲವಾಗುವದು । ನನಗದು ಸಂಜೀವನವಾಗಿಹುದು ॥೧॥ ವಾಸನೆಗಾಗಿ ಕೊಂಡುಪೋಗು । ಭೂಸುರವಾದ ಕಾಸುಮರಜವ ॥೨॥ ಅರುಹಲೇನು ಅಂಜನೇಯ ವಿರಹಿಗೀಂತು ವಿ । ನೋದಿಸದಿರು ॥೩॥

ವಿದೂ.—ಮಹಾರಾಣಿಯೆ ಇದೊ ನೋಡು ಆ ಭುಜಪತ್ರವನ್ನು ಹುಡುಕುತ್ತಿರುವ ಸಂಭ್ರಮವೇ ಇದು.

ರಾಣಿ.—ಒಳ್ಳೇದು ನೋಡೋಣ ಸುಮ್ಮನಿರು.

ವಿದೂ.—(ಪರ್ದೆಯಿಂದ ಮುಂದಕ್ಕೆ ಬಂದು ಹಾಗೇ ಮೆಲ್ಲಗೆ ಹಿಂದಕ್ಕೆ ಬಂದು) ಮಹಾರಾಜನೆ ಬಾಡಿದ ತಾವರೇಕುಸುಮದಂತೆ ಸ್ವಲ್ಪ ನೀಲವರ್ಣವಾದ ಈ ನವಿಲುಗರಿಯನ್ನು ಕಂಡು ಇದೇ ಭುಜಪತ್ರವೆಂದು ತಿಳಿದು ಮೋಸ ಹೋದೆ.

ರಾಜಂ.—ಸರ್ವಪ್ರಕಾರದಿಂದಲೂ ಮಂದಭಾಗ್ಯನಾದ ನಾನೇ ಕೆಟ್ಟು ಹೋದೆ.

ರಾಣಿ.—(ಜಾಗ್ರತೆಯಾಗಿಬಂದು) ಸಾಕು ಸಾಕು ಇಷ್ಟುಕಾತರವೇತಕ್ಕೆ ಆರ್ಯಪುತ್ರನೆ ಇದೊ ಆ ಭುಜಪತ್ರವು; ಒಪ್ಪಿಸಿಕೊಳ್ಳಬೇಕು.

ವಿದೂ.—(ಸಂಭ್ರಾಂತನಾಗಿ) ಇದೇನು ಮಹಾರಾಣಿ!

ರಾಜಂ.—(ಬೆರಗಾಗಿನೋಡಿ) ದೇವಿಯೆ ನಿನಗೆ ಸುಖಾಗಮನವೆ?

ವಿದೂ.—(ಮರೆಯಾಗಿ) ಈಗಲೀಗ ಬಹಳ ಕಷ್ಟಕ್ಕೆ ಬಂತು.

ರಾಜಂ.—(ಮರೆಯಲ್ಲಿ) ಮಿತ್ರನೆ ಈಗೇನುಮಾಡಬೇಕು?

ವಿದೂ.—(ಮರೆಯಲ್ಲಿ) ಒಡವೆಸಹಿತ ಸಿಕ್ಕಿದಕಳ್ಳನಿಗೆ ಪ್ರತಿವಚನವಾದ ಮಾತೇನುಂಟು?

ರಾಜಂ.—(ಪ್ರಕಾಶ) ದೇವಿ ನಾನು ಇದನ್ನು ಹುಡುಕುತ್ತಿರಲಿಲ್ಲ, ಮತ್ತೊಂದು ರಾಜಕೀಯವಾದ ಪತ್ರಿಕೆಯನ್ನು ಹುಡುಕುತ್ತಿದ್ದೆ.

ರಾಣಿ.—ಸರಿಸರಿ! ನಿನ್ನ ಸೌಭಾಗ್ಯವನ್ನು ನೀನು ಮರೆಸಿಕೊಳ್ಳುವದು ಯುಕ್ತ.

ವಿದೂ.—ಅಮ್ಮಾ ಮಹಾರಾಜನಿಗೆ ಜಾಗ್ರತೆಯಾಗಿ ಪಿತ್ತೋಪಶಮನವಾಗುವಂತೆ ಭೋಜನವನ್ನು ಮಾಡಿಸುವುದಕ್ಕೆ ಯುಕ್ತಿ ಸು.

ರಾಣಿ.—ಬಿಡುಬಿಡು ! ನಾನು ಅಲ್ಪಳು, ನಿನ್ನ ಅನುನಯುಸಾಳು, ನಿನ್ನ ದಾಕ್ಷಿಣ್ಯದ ಪಶ್ಚಾತ್ತಾಪವನ್ನು ಕಂಡರೆ ಭಯವಾಗುತ್ತೆ.

(ಎಂದು ರಾಯನನ್ನು ಬಿಟ್ಟು ಚೇಟಿಯೊಡನೆ ತೆರಳಿದಳು).

ವಿದೂ.—ಮಹಾರಾಜನೆ ಮಹಾರಾಣಿಯು ವರ್ಷಾಕಾಲದ ನದಿಯಂತೆ ಪ್ರಸನ್ನೆಯಾಗದೆ ಹೊರಟೇ ಹೋದಳು ಅನ್ನೇಳು.

ರಾಜ.—ಮಿತ್ರನೆ ಇದೇನು ಅಸಂಗತವಲ್ಲ.

ಕಂ ॥ ಹೃದಯದೊಳಗಿನಿಸುವೊಲವಿ ।
ಲ್ಲದೆ ಬರಿದಿನಿಯುಕ್ತಿಗಳಸುಗಿದನುನಯಿಸುವವರಾ ॥
ಹೃದಯಮನರಿದಂಗನೆಯರ ।
ಹೃದಯಂಗಮವಹುದೆ ಕಟ್ಟುಬಣ್ಣದಮಣಿವೋಲ್ ॥ ೨ ॥

ವಿದೂ.—ಮಹಾರಾಜನೆ ಮಹಾರಾಣಿಯು ಹೀಗೆ ಕೋಪಿಸಿಕೊಂಡು ಹೋದದ್ದೇ ನಿನಗೆ ಅನುಕೂಲವಲ್ಲವೆ? ಕಣ್ಣುಬೇನೆ ಬಂದವನು ದೀಪದ ಜ್ವಾಲೆ ಎದುರಿಗಿದ್ದರೆ ಸಹಿಸುವನೆ ?

ರಾಜ.—ಹಾಗಲ್ಲ ಕೇಳು—ಊರ್ವಶಿಯಲ್ಲಿ ನನಗೆ ಅನುರಾಗವಿದ್ದಾಗ್ಯೂ ದೇವಿಯಲ್ಲಿ ಪೂರ್ವದಂತೆಯೇ ಅಭಿಮಾನವಿರುವದು. ಆದರೆ ವಂದನೆಯನ್ನು ಮಾಡಿದಾಗ್ಯೂ ಉಲ್ಲಂಘಿಸಿ ಹೊರಟು ಹೋದದ್ದರಿಂದ ನಾನೂ ಕೂಡ ದೇವಿಯ ವಿಷಯದಲ್ಲಿ ಧೈರ್ಯವನ್ನೇ ಅವಲಂಬಿಸುವೆನು.

ವಿದೂ.—ಈಗ ನೀನು ಧೈರ್ಯವನ್ನು ಅವಲಂಬಿಸುವದು ಹಾಗಿರಲಿ. ಹಸಿವಿನಿಂದ ಹೋಗುತ್ತಿರುವ ಈ ಬ್ರಾಹ್ಮಣನ ಪ್ರಾಣಕ್ಕೆ ಸ್ವಲ್ಪ ಅವಲಂಬನೆಯನ್ನುಂಟುಮಾಡು. ಇದು ಸ್ನಾನಭೋಜನಗಳಿಗೆ ಸಮಯವಲ್ಲವೆ?

ರಾಜ.—(ಮೇಲೆನೋಡಿ) ಓಹೋ ಆಗಲೇ ಹಗಲಿನಲ್ಲಿ ಅರ್ಧಭಾಗ ಕಳೆದು ಹೋಯಿತು. ಈವೇಳೆಯಲ್ಲಿ—

## ತೃತೀಯ ಅಂಕವು.

---

( ಅನಂತರದಲ್ಲಿ ಗಾಲವ ಪೈಲವರೆಂಬ ಭರತಮುನಿ ಶಿಷ್ಯರು ಪ್ರವೇಶಿಸುವರು )

ಗಾಲವಂ.—ಎಲೈ ಪೈಲವನೆ ನಮ್ಮುಪಾಧ್ಯಾಯರು ಇಂದ್ರಭವನಕ್ಕೆ ಹೋಗುವಾಗ ನಿನ್ನನ್ನು ಸಂಗಡ ಕರೆದುಕೊಂಡು ಹೋದರು. ನನ್ನನ್ನು ಅಗ್ನಿಶಾಲೆಯ ರಕ್ಷಣಾರ್ಥವಾಗಿ ಇಲ್ಲೇ ಇರಿಸಿದ್ದರು. ಆದ್ದರಿಂದ ಇಂದ್ರಲೋಕದ ಸಮಾಚಾರವೇನು ? ಹೇಳು.

ಪೈಲವಂ.—ಹಾಗಾದರೆ ಕೇಳು, ನಮ್ಮುಪಾಧ್ಯಾಯರು ದೇವಸಭೆಯಲ್ಲಿ ಸರಸ್ವತಿಯಿಂದ ವಿರಚಿತವಾದ ಲಕ್ಷ್ಮೀಸ್ವಯಂವರವೆಂಬ ನಾಟಕವನ್ನಾಡಿಸಿದರು. ಆಕಾಲದಲ್ಲೊಂದು ಆಶ್ಚರ್ಯ ನಡೆಯಿತು.

ಗಾ.—ಅದೇನು ! ಹೇಳು ಹೇಳು.

ಪೈ.—ಆ ನಾಟಕದಲ್ಲಿ ಮೇನಕೆ ವಾರುಣೀಪುತ್ರಿಯ ವೇಷವನ್ನು ಧರಿಸಿದ್ದಳು ಊರ್ವಶಿಯು ಲಕ್ಷ್ಮೀ ವೇಷವನ್ನು ಧರಿಸಿದ್ದಳು. ವಾರುಣೀಪುತ್ರೀವೇಷವನ್ನು ಧರಿಸಿದ್ದ ಮೇನಕೆಯು ಸ್ವಯಂವರಕಾಲದಲ್ಲಿ ಲಕ್ಷ್ಮೀವೇಷವನ್ನು ಧರಿಸಿದ್ದ ಊರ್ವಶಿಯನ್ನು ಕುರಿತು " ಎಲೆ ಸಖಿ ಇಲ್ಲಿ ದೇವೇಂದ್ರಮೊದಲಾದ ಲೋಕಪಾಲಕರೂ ಪುರುಷೋತ್ತಮನಾದ ನಾರಾಯಣನೂ ಸಹ ಬಂದಿರುವರಷ್ಟೆ ? ಇವರೊಳಗೆ ನಿನಗೆ ಯಾರಲ್ಲಿ ಅನುರಾಗ " ಎಂದು ಕೇಳಿದ್ದಕ್ಕೆ ಊರ್ವಶಿಯು ಪುರುಷೋತ್ತಮನಲ್ಲಿ ಎಂದು ಹೇಳುವದನ್ನು ಬಿಟ್ಟು ಪುರೂರವನಲ್ಲಿ ಎಂದು ಹೇಳಿಬಿಟ್ಟಳು.

ಗಾ.—ಬುದ್ಧಿಯೂ ಇಂದ್ರಿಯಗಳೂ ಕೂಡ ದೈವಾಯತ್ತಗಳಾಗಿರುವವು. ಆಗ ನಮ್ಮುಪಾಧ್ಯಾಯರಾದ ಭರತಮಹರ್ಷಿಗಳು ಆಕೆಯ ಮೇಲೆ ಕೋಪಿಸಿಕೊಳ್ಳಲಿಲ್ಲವೋ ?

ಪೈ.—ಅದಕ್ಕೆ ನಮ್ಮುಪಾಧ್ಯಾಯರು ಶಾಪವನ್ನು ಕೊಟ್ಟರು.

ಗಾ.—ಅದು ಹ್ಯಾಗೆ ?

ವೈ.—ನಾನು ಹೇಳಿಕೊಟ್ಟದ್ದನ್ನು ನೀನು ತಪ್ಪಿದ್ದರಿಂದ ನಿನಗೆ ದೇವಲೋಕದಲ್ಲಿ ವಾಸತಪ್ಪಲಿ ಎಂದು ಉಪಾಧ್ಯಾಯರು ಶಾಪವನ್ನು ಕೊಟ್ಟರು. ಆಮೇಲೆ ವ್ಯಸನಪಡುತ್ತ ನಿಂತಿದ್ದ ಊರ್ವಶಿಯನ್ನು ನೋಡಿ ಮಹೇಂದ್ರನು ಎಲೆ ಊರ್ವಶಿ ನನಗೆ ಯುದ್ಧದಲ್ಲಿ ಸಹಾಯನಾದ ಆ ಪುರೂರವನಿಗೆ ನಿನ್ನಲ್ಲಿ ಸಂತಾನ ದರ್ಶನವಾಗುವವರೆಗೂ ನೀನು ಭೂಲೋಕದಲ್ಲಿ ಅತನಿಗೆ ಪ್ರಿಯಳಾಗಿದ್ದು ಅನಂತರ ದೇವಲೋಕಕ್ಕೆ ಬರತಕ್ಕದ್ದೆಂದು ಶಾಪಾವಸಾನವನ್ನು ಕರುಣಿಸಿದನು.

ಗಾ.—ಪುರುಷರ ತಾರತಮ್ಯವನ್ನು ಬಲ್ಲ ಇಂದ್ರನಿಗೆ ಇದು ಯುಕ್ತ.

ವೈ.—(ಸೂರ್ಯನನ್ನು ನೋಡಿ) ಈ ಕಥಾ ಪ್ರಸಕ್ತಿಯಿಂದ ನಮ್ಮುಪಾಧ್ಯಾಯರ ಸ್ನಾನಕಾಲ ಮೀರಿತು. ನಡೆ ಹೋಗೋಣ.

(ಎಂದು ತೆರಳಿದರು).

ಕಂಚುಕಿ.—(ಪ್ರವೇಶಿಸಿ)

ವೃತ್ತ ॥ ಜನರುದ್ಯೋಗಿಗಳೆಲ್ಲರುಂಹರೆಯದೊಳ್ಭೋಗ್ಯಂಗಳಂಭೋಗಿಸಲ್।
ತನಯರ್ಕ್ಕಳ್ಗೆನಿಜಭಾರಮಂತಳೆದುವೃದ್ಧರುಂವಿಶ್ರಾಂತಿಯಂಪೊಂದುವರ್ ॥
ತನುವಂತಳ್ಗ್ಗಸೇವೆಯಿಂತೆಮಗೆನಿತ್ಯಂಬಂಧನಾವಾಸಮೆಂ ।
ದೆನಿಸಿರ್ಕ್ಕಂತೆಗೆಕಷ್ಟಮೊಂದುಮಬಲಾಲೋಕಾಧಿಕಾರಂಕರಂ ॥

ಮಹಾರಾಣಿಯು ನನಗಾಜ್ಞಾಪಿಸಿರುವಳು. ಏನೆಂದರೆ, "ವ್ರತಾಚರಣೆಗೋಸ್ಕರ ನಾನು ಕೋಪವನ್ನು ಬಿಟ್ಟು ಮಹಾರಾಜನನ್ನು ಮೊದಲೇ ಬೇಡಿಕೊಂಡಿರುವೆನು. ಈಗ ನೀನು ಸಾಕ್ಷಾತ್ತಾಗಿ ಹೋಗಿ ಈ ವಿಷಯವನ್ನು ಮಹಾರಾಜನಿಗೆ ಅರಿಕೆ ಮಾಡಿಬಾ" ಎಂದು ಆಜ್ಞಾಪಿಸಿರುವಳು. ಸಾಯಂಕಾಲದ ನಿತ್ಯಕರ್ಮವನ್ನು ತೀರಿಸಿಕೊಂಡು ಬರುವ ಮಹಾರಾಜನನ್ನು ಇಲ್ಲಿ ಕಾದಿದ್ದು ಆವಿಷಯವನ್ನು ತಿಳಿಸುವೆನು. (ಎಂದು ಅಲ್ಲೇ ತಿರುಗಾಡುತ್ತಾ ನೋಡಿ) ಈ ಅರಮನೆಯಲ್ಲಿ ಸಂಧ್ಯಾಕಾಲದಲ್ಲಿ ನಡೆಯತಕ್ಕ ಕಾರ್ಯಗಳು ಬಹು ರಮಣೀಯವಾಗಿವೆ.

ವೃತ್ತ ॥ ಕತ್ತಿದಂತಿರುಳ್ಗಂನವಿಲ್ ಕವೆನಿದ್ರಿಕುಂನೆಳೆಗೋಲ್ಗಳೊಳ್ ।
ಯುತ್ತ ಮತ್ತ ಕಪೋತಕಂಕೆಯುಜಾಲನಿಸ್ಸೃತಧೂಪಮುಂ ॥
ಸುತ್ತು ತಿರ್ಪ್ಪುದುಮೋಳಿಮಾಡಗಳಲ್ಲಿ ವೃದ್ಧಜನಂಗಳ್ ।
ತೆತ್ತಮುಂಸಮರಿಪ್ಪ ಪೂವಲಿದಾಣರೊಳ್ ನೋಡಿರಿಪ್ಪವರ ॥ ೨ ॥

(ಹಾಗೇ ನೋಡಿ) ಓಹೋ ! ನಮ್ಮ ಮಹಾರಾಜನು ಇತ್ತಲಾಗಿಯೇ ಹೊರಟಿರುವನು. ಆಹ !

ಕಂ ॥ ನೆರೆದಿರೆಸುತ್ತುಂ ತೊಳ್ತರ ।
ಕರದೀಪಪ್ರಕರಸೀನ್ನಕಂತುಟದೊಳ್ ಪ್ಪೂ ॥
ತಿರೆಕರ್ಣಿಕಾರತರುಗಳ್ ।
ಕರಮೆಸೆವನಿರಂಕೆಯುಳ್ಳಚರಿಪದ್ರಿಯಂತ್ರೋಲ್ ॥ ೩ ॥

ನಾನಿತ್ತಲಾಗಿ ನಿಂತು ಮಹಾರಾಜನನ್ನು ಕಾಣುವೆನು.

(ಎಂದು ನಿಲ್ಲುವನು).

(ರಾಯನು ವಿದೂಷಕನೊಡನೆ ಪ್ರವೇಶಿಸುವನು).

*ರಾಜಂ.—ಕಂ ॥ ಕಳೆದೆಂಪಲಕರೆದುಂಬ್ಬಗ ।
ಗಳನಾಪಲ್ಲವೆಯುಹಂಬಲಿಲ್ಲದೆಪಗಲಂ ॥
ಕಳವೆಂವಿನೋದಮಿಲ್ಲದೆ ।
ಬಳಿಬಳಿದಮಿಮಿಂಚ್ಚುವಿರುಳನೇಂತರಿಯಿಂದಂ ॥ ೪ ॥

ಕಂ.—(ಸಮೀಪಕ್ಕೆ ಬಂದು) ಮಹಾರಾಜನಿಗೆ ಜಯವಾಗಲಿ ಮಹಾರಾಜನೆ ರೋಹಿಣೀಸಹಿತನಾದ ಚಂದ್ರನು ಉದಯಿಸಿ ನನ್ನ ಪೂಜೆಯನ್ನು

---

*॥ ರಾಗ—ಭೈರವಿ ॥ ॥ ರೂಪಕತಾಳ ॥

ಎಂದಿಗೆ ನಾ ನೋಡುವೆನು । ಸುಂದರಾಂಗಿಯನ್ನು ಹಾಹಾ ॥ ಪ ॥ ಯುಗಶತಕ್ಕೆ ಸದೃಶವಾದ । ಹಗಲು ರಾಜಕಾರ್ಯದಿಂದ ॥ ಮುಗಿದು ಹೋಯಿತೆಂತುಮಿಂತುಂ । ಸುಗುಣಿಯಾದ ಕಾಂತೆಯನ್ನು ॥ ೧ ॥ ಅಂತಹ ವಿನೋದವಿಲ್ಲ । ದಿಂತು ದೀರ್ಘವಾದಿರುಳ್ ॥ ಎಂತು ಮುಗಿಸನಕ್ಕಟ ಹಾಹಾ । ಕಂತುಜನಕಸಹಾಯೆಯನ್ನು ॥ ೨ ॥ ಈಸಮಯಮನೋಹರಾ । ಪ್ರಾಸುರಳನು ನನ್ನನೀಗ ॥ ಘಾಸಿಮಾಡುತ್ತಿಹನಿಂತು । ಭಾಸುರಾಂಗಿಯನ್ನು ॥

ಸ್ವೀಕರಿಸುವವರೆಗೆ ತಪಸ್ವಿನಿ ನಾನು ಮಣಿಹರ್ಮ್ಯಪ್ರಾಸಾದದ ಮೇಲೆ ಇರಬೇಕಾಗಿದೆ ಯೆಂದು ಮಹಾರಾಣಿಯು ವಿಜ್ಞಾಪಿಸುವಳು.

ರಾಜಂ.—ಎಲೈ ಸತ್ಯಕೀರ್ತಿಯೆ ನಿನ್ನಿಚ್ಛೆಯಿದ್ದಂತಾಗಲಿ ಎಂದು ದೇವಿಗೆ ವಿಜ್ಞಾಪಿಸು.

ಕಂ.—ಅಪ್ಪಣೆ. (ಎಂದು ತೆರಳಿದನು.)

ರಾಜಂ.—ಮಿತ್ರನೆ ಈ ವೃತ್ತಾಂತರಚನೆಯು ನಿಜವಾಗಿದ್ದೀತೆ ?

ವಿದೂ.—ಮಹಾರಾಣಿಯು ಈಗ ಪಶ್ಚಾತ್ತಾಪಯುಕ್ತಳಾಗಿ ಮೊದಲು ಕೋಪದಿಂದ ನಿನ್ನ ವಂದನೆಯನ್ನು ಉಲ್ಲಂಘಿಸಿ ಹೋದ ಅಪರಾಧವನ್ನು ಪರಿಹರಿಸಿಕೊಳ್ಳುವದಕ್ಕೆ ಇದೊಂದು ನೆವವನ್ನು ತೆಗೆದಿರುವಂತೆ ನನಗೆ ತೋರುವದು.

ರಾಜಂ.—ನೀನು ಸರಿಯಾಗಿ ಹೇಳಿದೆ.

ಕಂ॥ ಮೊಳೆದೊಡಮುಡಿಗೆಡಿಗಂ ದ ।
ಕ್ಷೀಣನಾಯಕರಂದು ಸತ್ಕೃಗೆಯ್ದೊಡೆಮುಳಿಸಿಂ ॥
ಪ್ರೀಣಯಿಸಿದರ್ತ್ತಿಹರ್ಮ್ಮಳ ।
ಸೋವಂತಗಳ ನೆನೆದು ಮನದೊಳವರನುನಯಮಂ ॥ ೫ ॥

ಒಳ್ಳೆದು ಮಣಿಹರ್ಮ್ಯದ ಮಾರ್ಗವನ್ನು ತೋರಿಸು, ಅಲ್ಲಿಗೆ ಹೋಗೋಣ.

ವಿದೂ.—ಮಹಾರಾಜನೆ ಈಕಡೆ ದಯಮಾಡಿಸಬೇಕು.
(ಎಂದು ನಡೆದು ನೋಡಿ) ಮಹಾರಾಜನೆ ಗಂಗಾನದಿಯು ತೆರೆಗಳಂತೆ ಕಂಗೊಳಿಸುತ್ತಿರುವ ಈ ಸ್ಫಟಿಕಮಯವಾದ ಸೋಪಾನಮಾರ್ಗದಿಂದ ರಮಣೀಯವಾದ ಮಣಿಹರ್ಮ್ಯವನ್ನು ಹತ್ತುವನಾಗು.

ರಾಜಂ.—ನೀನು ಮುಂದೆ ನಡೆ. (ಎಲ್ಲರೂ ಹತ್ತಿ ಹೋಗುವರು).

ವಿದೂ.—(ನೋಡಿ) ಮಹಾರಾಜನೆ ಸ್ವಲ್ಪಸ್ವಲ್ಪವಾಗಿ ಕತ್ತಲೆಯಿಂದ ಬಿಡಲ್ಪಡುತ್ತಿರುವ ಪೂರ್ವದಿಕ್ಕು ಕೆಂಪಾಗಿರುವದನ್ನು ನೋಡಿದರೆ ಚಂದ್ರನು ಉದಯಪರ್ವತದ ಸಮೀಪಕ್ಕೆ ಬಂದಿರುವಂತೆ ತೋರುತ್ತೆ.

ವಿದೂ.—ಬ್ರಾಹ್ಮಣವಚನವೆಂದಿಗೆ ತಪ್ಪೀತು.

(ರಾಯನು ಆಶಾಬದ್ಧನಾಗಿರಲು)

(ಆಕಾಶಮಾರ್ಗದಿಂದ ಊರ್ವಶೀ ಚಿತ್ರಲೇಖೆಯರು ಪ್ರವೇಶಿಸುವರು).

ಊರ್ವ.—(ತನ್ನನ್ನು ನೋಡಿಕೊಂಡು)*ಎಲೆ ಚಿತ್ರಲೇಖೆ ನನ್ನ ಪ್ರಾಣಕಾಂತನ ಸನ್ನಿಧಿಗೆ ಹೊರಟಿರುವ ನನಗೆ ಮಿತವಾದ ಆಭರಣಗಳಿಂದಲೂ ಕಪ್ಪಾದ ಮೇಲುಹೊದ್ದಿಕೆಯಿಂದಲೂ ಕೂಡಿರುವ ಈ ಅಲಂಕಾರವು ಒಪ್ಪುತ್ತಿರುವದೆ ?

ಚಿತ್ರ.—ಇದನ್ನು ಶ್ಲಾಘಿಸುವದಕ್ಕೆ ನನ್ನ ವಾಕ್ಯಗಳು ಸಾಲದು. ಮನಸ್ಸಿಗಾದರೆ ನಾನೇ ಆ ಪುರೂರವನಾಗಬಹುದೆ ! ಎಂದು ತೋರುವದು.

ಊರ್ವ.—ಎಲೆಸಖಿ ಇದೇಕ್ಷಣದಲ್ಲಿ ನೀನು ನನ್ನನ್ನು ಆ ಮಹಾರಾಜನ ಬಳಿಗೆ ಕರೆದುಕೊಂಡು ಹೋಗೆಂದು ಮನ್ಮಥನು ನನಗಾಜ್ಞಾಪಿಸುವನು.

ಚಿತ್ರ.—ಎಲೆ ಊರ್ವಶಿ ರೂಪಾಂತರವನ್ನು ಹೊಂದಿದ ಕೈಲಾಸಶಿಖರವೋ ಎಂಬಂತೆ ಕಂಗೊಳಿಸುತ್ತಿರುವ ನಿನ್ನ ನಾಯಕನ ಅರಮನೆಗೆ ಬಂದೆವು.

ಊರ್ವ.—ಹಾಗಾದರೆ ನನ್ನ ಹೃದಯಚೋರನಾದ ಆ ಮಹಾರಾಜನು ಎಲ್ಲಿರುವನೋ ಏನುಮಾಡುತ್ತಿರುವನೋ ಪ್ರಭಾವದಿಂದ ನೋಡಿ ತಿಳಿ.

---

*॥ ರಾಗ—ಬೇಹಾಗು ॥ ॥ ರೂಪಕತಾಳ ॥

ಊರ್ವ.—ಸರಸಿಜಾಕ್ಷಿ ಪೋಗಲಾ ಅರಸನಲ್ಲಿಗೆ ॥ ಸುದತಿಯೇಳು ತನ್ನ ನಿಂ । ಗರದುಕಂದವು ॥ ೧ ॥

ಚಿತ್ರ.—ಪೋಗಲ್ಯಾತಕೇನು ನಿನ್ನ ಸೊಬಗ । ಮಾಗುವದನೋಡಲು ॥ ಸುಗುಣನಾದ ರಾಯನಾಗೆ । ಬಗೆಗೆ ತೋರ್ಪುದು ॥ ೨ ॥

ಊರ್ವ.—ಅರಸನಲ್ಲಿಗೋರ್ವಳೆನಾಂ । ತೆರಳಲಾರೆನು ॥ ಕರೆದುಕೊಂಡು ಜೊತೆಯೊಳೆನ್ನ ತರುಣಿಪೋಗುನೀಂ ॥ ೩ ॥

ಚಿತ್ರ.—(ಧ್ಯಾನದಿಂದ ನೋಡಿ ನಕ್ಕು ಆತ್ಮಗತವಾಗಿ) ಒಳ್ಳೇದು ಈಗ ಸ್ವಲ್ಪ ಚಮತ್ಕಾರವಾಗಿ ಮಾತನಾಡುತ್ತೇನೆ. (ಪ್ರಕಾಶ) ಎಲೆ ಊರ್ವಶಿ ನಾನು ನೋಡಲಿಕ್ಕಾಗಿ ಆತನು ಉಪಭೋಗಕ್ಕೆ ಯೋಗ್ಯವಾದ ಸ್ಥಾನದಲ್ಲಿ ತನ್ನ ಮನೋರಥದಿಂದ ಕಲ್ಪಿತಳಾದ ಪ್ರಿಯಳ ಸಮಾಗಮಸುಖವನ್ನು ಅನುಭವಿಸುತ್ತಿರುವನು.

ಊರ್ವ.—ಏನೆಂದೆ ? ಹಾಗಿದ್ದರೆ ಆಕೆಯು ಧನ್ಯಳಲ್ಲವೆ ?

ಚಿತ್ರ.—ಎಲೆ ಮುಗ್ಧೆ ನೀನಲ್ಲದೆ ಆತನ ಸಂಕಲ್ಪಕ್ಕೆ ಗೋಚರಳಾದವಳು ಅನ್ಯಾರು ?

ಊರ್ವ.—ಅಷ್ಟುವೆಷ್ಟ್ಗೆ ತಿಳಿಯಲಾರದ ಈ ನನ್ನ ಮನಸ್ಸು ಸಂದೇಹ ಪಡುತ್ತಿರುವದು.

ಚಿತ್ರ.—(ನೋಡಿ) ಎಲೆ ಸಖಿ ಆ ರಾಜರ್ಷಿಯು ಮಣಿಹರ್ಮ್ಯದಲ್ಲಿ ತನ್ನ ಮಿತ್ರನೊಡನೆ ಸೇರಿರುವನು. ಅಲ್ಲಿಗೆ ಹೋಗೋಣ ನಡೆ.

(ಎಂದಿಬ್ಬರೂ ಇಳಿಯುವರು).

ರಾಜ.—ಮಿತ್ರನೆ ನನಗೆ ರಾತ್ರಿಯಂತೆ ಮನ್ಮಥತಾಪವೂ ಹೆಚ್ಚುತ್ತಿರುವದು.

ಊರ್ವ.—ಎಲೆ ಕೆಳದಿ ಈ ಮಾತಿನ ಅರ್ಥವು ಸ್ಪಷ್ಟವಾಗಿಲ್ಲ. ನಿನ್ನ ಮಾತಿನಿಂದ ಸ್ವಲ್ಪ ನೆಮ್ಮದಿಯಾಗಿದ್ದ ನನ್ನ ಮನಸ್ಸಿಗೆ ಕಳವಳವುಂಟಾಗಿರುವದು ; ಸಂದೇಹಪರಿಹಾರವಾಗುವವರಿಗೂ ನಾವು ತಿರಸ್ಕರಿಣೀ ಪ್ರಭಾವದಿಂದ ಕಾಣಿಸಿಕೊಳ್ಳದಂತೆ ಇಲ್ಲಿಯೇ ಮರೆಯಾಗಿ ನಿಂತು ಅವರ ಸ್ವೇಚ್ಛಾಲಾಪಗಳನ್ನು ಕೇಳೋಣ.

ಚಿತ್ರ.—ಒಳ್ಳೇದು ನಿನ್ನಿಷ್ಟವಿದ್ದಂತಾಗಲಿ.

(ಎಂದು ಮರೆಯಾಗಿ ನಿಲ್ಲುವರು).

ವಿದೂ.—ಮಿತ್ರನೆ ಹಾಗಾದರೆ ನಿನ್ನ ಸಂತಾಪವನ್ನು ಕಳೆಯುವದಕ್ಕೆ ಒಂದುಪಾಯವುಂಟು, ಕೇಳು ; ಅತ್ಯಂತ ಶೀತಳವಾಗಿರುವ ಅಮೃತಮಯವಾದ ಚಂದ್ರನ ಕಿರಣಗಳನ್ನು ಸೇವಿಸು.

ರಾಜ.—ಇವುಗಳಿಂದಲೆಲ್ಲಾ ಏನೂ ಆಗಲಾರದು.

ವೃತ್ತ॥ ನವಕುಸುಮಕಲ್ಪಮುಂದಮಾಲಿಕೆಗಳು ಮತ್ತಾಸುಗಂಧಲೇಪನಮುಂ॥

ಕುವಲಯಬಾಂಧವಾಂಶುಗಳು ವಾರಿಸಲಾರವನಂಗತಾಪಮಂ ।

ದಿವಿಜವಧೂಸುಧಾಂಶುಮುಖಿ ಪಾರಿಸಲಾಪ್ಪಳದಂ

ಊರ್ವ.—ಆ ದಿವ್ಯಸ್ತ್ರೀ ಇನ್ಯಾರವಳು !

ರಾಜ.—ಮಹೋಕ್ಷ್ಣವಹಾ ।

ದಯವಿತ್ತಿಯಮನಿಶ್ಯಬ್ದಕೃತಸಂಕಥೆಯಿಂದೊಲವಮಾರ್ಪ್ಪಡಾರಿಸಲ್ ॥

ಊರ್ವ.—ಎಲೆ ಮನಸ್ಸೆ ನೀನು ಅಂಥಾ ಸ್ವರ್ಗವನ್ನು ಬಿಟ್ಟು ಬಂದದ್ದಕ್ಕೆ ತಕ್ಕ ಫಲವಾಯಿತು.

ವಿದೂ.—ನನಗೂ ದಿವ್ಯವಾದ ದ್ರಾಕ್ಷೀರಸವೂ ಮಾವಿನರಸವೂ ಸಿಕ್ಕದೇ ಇದ್ದಾಗ ನಾನೂ ಅವುಗಳನ್ನು ನೆನೆಸಿಕೊಂಡೇ ತೃಪ್ತಿಪಡುವೆನು.

ರಾಜ.—ಅದೆಲ್ಲಾ ನಿನಗೆ ದೊರೆಯಬಹುದು.

ವಿದೂ.—ಹಾಗಾದರೆ ಆ ಹೆಣ್ಣು ನಿನಗೆ ದೊರೆಯಬಹುದು.

ರಾಜ.—ಮಿತ್ರನೆ ನಾನು ತಿಳಿದಿರುವದನ್ನು ಕೇಳು.

ಚಿತ್ರ.—ಎಲೆ ಸಂಕರಮಾನ್ಯಳೆ ಚೆನ್ನಾಗಿ ಕೇಳು.

ವಿದೂ.—ಹ್ಯಾಗೆ ಹೇಳು ಸ್ವಲ್ಪ ಕೇಳೋಣ.

ರಾಜ.—ಕಂ॥ ಆಕೆಯುಲಗಿದೊಳಾಮುನಿ ।

ಜಾತೆಯಮಧುಜವಿರವನೋಳ್ವಿಕೆದೆನ್ನಿಳ್ಭೊಂಜಿಪೊಳಂ ॥

ದೇಹಾನಾದುಪಧ್ಯಾಂ ।

ಘೋಷಿಳ್ಕತ್ವಾಂತ ಭ್ರಾಂತಮುಖಾಂಗಂಗಳ್ ॥ ೧೧॥

ಚಿತ್ರ.—ಎಲೆ ಸಖಿ ಏನಿನ್ನು ತಡವೇತಕ್ಕೆ ?

ಊರ್ವ.—(ಜಾಗ್ರತೆಯಾಗಿ ಮುಂದೆ ಬಂದು) ಎಲೆ ಚಿತ್ರಲೇಖೆ ಇದೇನು ರಾಜನು ಎದುರಿಗೆ ನಿಂತಿದ್ದಾಗ್ಯೂ ಮಹಾರಾಜನು ಉದಾಸೀನನಾಗಿರುವನು ?

ಚಿತ್ರ.—(ನಕ್ಕು) ಆತುರದಿಂದ ತಿರಸ್ಕರಿಣಿಯನ್ನು ತೆಗೆಯದೆ ಹೋದೆ. ನಿನ್ನನ್ನು ಕಾಣಬಾರದ ಮಹಾರಾಜನನ್ನು ಉದಾಸೀನನೆಂದು ಹ್ಯಾಗೆಣಿಸುವೆ ?

ಕಂಚುಕಿ.—ಇತ್ತ ಇತ್ತ ಮಹಾರಾಣಿಯವರು.

(ಎಲ್ಲರೂ ಕಿವಿಗೊಟ್ಟು ಕೇಳುವರು).

(ಊರ್ವಶಿಯು ಸಂಭ್ರಾಂತಳಾಗಿ ನಿಲ್ಲುವಳು).

ವಿದೂ.—ಓಹೋ ! ಮಹಾರಾಣಿಯು ಬಂದು ಬಿಟ್ಟಳು ; ಇನ್ನು ಶೀಘ್ರವಾಗಿ ಬಾಯಿಮುಚ್ಚು.

ರಾಜ.—ನೀನೂ ಈ ಸಂಗತಿ ಪ್ರಕಾಶವಾಗದಂತೆ ಸುಮ್ಮನಿರು.

ಊರ್ವ.—ಚಿತ್ರಲೇಖೆ ಈಗ ನಾವೇನು ಮಾಡತಕ್ಕದ್ದು ?

ಚಿತ್ರ.—ಯಾತಕ್ಕೀಸ್ಪರ ಭಯಪಡುತ್ತೀಯೆ ? ತಿರಸ್ಕರಿಣೀ ವಿದ್ಯೆ ನಮ್ಮಲ್ಲಿಲ್ಲವೆ ? ವ್ರತನಿಯಮದಲ್ಲಿರತಕ್ಕ ಈಕೆ ರಾಯನ ಸಮೀಪದಲ್ಲಿ ಬಹಳ ಹೊತ್ತು ನಿಲ್ಲುವದಿಲ್ಲ.

(ರಾಣಿಯು ಪೂಜಾಸಾಮಗ್ರೀಸಮೇತರಾದ ಚೇಟಿಯರೊಡನೆ ಪ್ರವೇಶಿಸುವಳು).

ಚೇಟಿ.—ಇತ್ತ ಇತ್ತ ಮಹಾರಾಣಿಯವರು.

ರಾಣಿ.—(ಚಂದ್ರನನ್ನು ನೋಡಿ) ಎಲೆ ನಿಪುಣಿಕೆ ಈ ಚಂದ್ರನು ರೋಹಿಣೀ ಸಂಯೋಗದಿಂದ ಈಗ ಅತ್ಯಂತವಾಗಿ ಪ್ರಕಾಶಿಸುತ್ತಿರುವನು.

ನಿಪು.—ತಮ್ಮ ಸಾನ್ನಿಧ್ಯದಿಂದ ಮಹಾರಾಜನು ಪ್ರಕಾಶಿಸುವಂತೆ ರೋಹಿಣಿಯ ಸಾನ್ನಿಧ್ಯದಿಂದ ಚಂದ್ರನು ವಿಶೇಷವಾಗಿ ಪ್ರಕಾಶಿಸುವದೇ ಸಹಜ.

ವಿದೂ.—ಅಯ್ಯಾ ಮಹಾರಾಣಿಯು ಬ್ರಾಹ್ಮಣನಾದ ನನಗೆ ಸ್ವಸ್ತಿವಾಚನನಿಮಿತ್ತವಾದ ಉಪಾಯನ ದಾನವನ್ನು ಕೊಟ್ಟಳೆಂತಲೂ ನಿನ್ನ ವಿಷಯದಲ್ಲಿ ಚಂದ್ರವ್ರತವನ್ನು ಮಾಡಬೇಕೆಂಬ ನೆವದಿಂದ ಕೋಪವನ್ನು

ಬಿಟ್ಟು ಪ್ರಸನ್ನಳಾಗಿರುವಂತೆಯೂ ತೋರುವದ್ದರಿಂದ ನನ್ನ ಕಣ್ಣಿಗೆ ಅತ್ಯಂತ ಸಂತೋಷಕರಳಾಗಿದಾಳೆ.

ರಾಜ.—(ನಗುತ್ತಾ) ಈಕೆಯು ಸಂತೋಷಕರಳಾಗಿರುವದಕ್ಕೆ ನಿನ್ನ ವಿಷಯದಲ್ಲಿ ಎರಡು ಕಾರಣಗಳೂ ಇರಬಹುದು; ನನಗಾದರೆ ಎರಡನೇ ಕಾರಣ ವೊಂದೇ. ಕೇಳು—

ವೃತ್ತ॥ ಕರದೊಳ್ ಮಂಗಳಸೂತ್ರವೊಪ್ಪೆ ಕುರುಳೊಳ್ ದೂರ್ವಾಂಕುರಂ
ಶೋಭಿಸಲ್ ।
ಪಿರಿದುಂ ರಂಜಿಸೆ ಕೋಮಲಾಂಗಲತೆಯೊಳ್ ನವ್ಯಂದುಕೂಲಂ ವ್ರತಾ॥
ಚರಣವ್ಯಾಜದೆ ವಕ್ರಭಾವವುಳಿದಿರ್ಪೀವಾಸಿನೀರತ್ನದೊಂ ।
ದಿರವೇ ಎನ್ನೊಳತಿ ಪ್ರಸನ್ನೆಯೆನುತಂ ಪೇಳುತ್ತುಮಿರ್ಕ್ಕುಂನಿದಂ ॥೧೭॥

ರಾಣಿ.—(ಸಮೀಪಕ್ಕೆ ಬಂದು) ಆರ್ಯಪುತ್ರನಿಗೆ ಜಯವಾಗಲಿ.

ಚೇಟಿಯರು.—ಮಹಾರಾಜನಿಗೆ ಜಯವಾಗಲಿ.

ವಿದೂ.—ಎಲೌ ಪೂಜ್ಯಳೆ ನಿನಗೆ ಮಂಗಳವಾಗಲಿ.

ರಾಜ.—ಎಲೆ ದೇವಿ ನಿನಗೆ ಸುಖಾಗಮನವೆ ?

(ಕೈ ಹಿಡಿದುಕೊಂಡು ಕೂಡಿಸಿಕೊಳ್ಳುವನು).

ಊರ್ವ.—ಎಲೆ ಸಖಿ ಈಕೆ ದೇವಿಯೆಂದು ಕರೆಸಿಕೊಳ್ಳುವದಕ್ಕೆ ಯೋಗ್ಯಳೇ ಸರಿ. ಗುಣಗಳಲ್ಲಿ ಯಾವಭಾಗದಲ್ಲಿತಾನೇ ದೇವತಾ ಸ್ತ್ರೀಗಿಂತ ಕಡಮೆಯಾಗಿಧಾಳೆ ?

ಚಿತ್ರ.—ನಿಜ ಮಾತ್ಸರವಿಲ್ಲದೆ ನೀನು ಸರಿಯಾಗಿ ಹೇಳಿದೆ.

ರಾಣಿ.—ಆರ್ಯಪುತ್ರನೆ ನಿನ್ನನ್ನು ಪುರಸ್ಕರಿಸಿ ಈಗ ನಾನೊಂದು ವ್ರತವನ್ನು ಆಚರಿಸುವೆನು. ಅದಕ್ಕೋಸ್ಕರ ಒಂದು ಮುಹೂರ್ತ ನನ್ನ ನಿರ್ಬಂಧವನ್ನು ಸಹಿಸಬೇಕು.

ರಾಜ.—ಮಾಣವಕನೆ ಈಕೆ ಮಾಡುವ ನಿರ್ಬಂಧವು ನನಗೆ ಅನುಗ್ರಹವಲ್ಲವೆ ?

ವಿದೂ.—ನನಗೆ ಸ್ವಸ್ತಿವಾಚನೆ ದೊರೆಯುತಕ್ಕ ಇಂಥಾ ನಿರ್ಬಂಧಗಳು ಎಷ್ಟಾದರೂ ಆಗಲಿ.

ರಾಜಂ.—ಈಗ ದೇವಿ ಮಾಡತಕ್ಕ ವ್ರತದ ಹೆಸರೇನು ?

ರಾಣಿ.—( ನಿಪುಣಿಕೆಯ ಮುಖವನ್ನು ನೋಡುವಳು ).

ನಿಪು.—ಮಹಾರಾಜನೆ ಈ ವ್ರತದ ಹೆಸರು ಪ್ರಿಯಪ್ರಸಾದನವೆಂದು.

ರಾಜಂ.—( ರಾಣಿಯನ್ನು ನೋಡಿ )—

ಕಂ ॥ ಎಲೆ ಕೋಮಲಾಂಗಿ ನಿನ್ನಯ ।
ತ್ರಿಳವನೆ ಹಾರೈಸುತಿರ್ಪ ದಾಸನನೆನ್ನಂ ॥
ತಿಳಿಯಿಪವಮನದಿಂ ನಿನ್ನಯ ।
ಲಲಿತಾಂಗವನೇತಕಿಂತು ಕಂದಿಪೆ ಮುಗುದೇ ॥ ೧೩ ॥

ಊರ್ವ.—ಎಲೆ ಸಖಿ ಈತನು ರಾಣಿಯನ್ನು ಎಷ್ಟುಮೋಲವಾಗಿ ತಿಳಿದಿರುವನು ?

ಚಿತ್ರ.—ಎಲೆ ಮುಗ್ಧೆ ಹಾಗಲ್ಲ ಕೇಳು, ಅನ್ಯಸ್ತ್ರೀಯರಲ್ಲಿ ಅನುರಕ್ತರಾದ ಪುರುಷರು ಸ್ವಸ್ತ್ರೀಯಲ್ಲಿ ಅತಿ ವಿನಯವನ್ನು ತೋರಿಸತಕ್ಕದ್ದೇ ಸ್ವಭಾವ.

ರಾಣಿ.—ಉಪಕ್ರಮದಲ್ಲೇ ಫಲವನ್ನು ತೋರಿಸುವ ಈ ವ್ರತದ ಮಾಹಾತ್ಮ್ಯವನ್ನು ಎಷ್ಟೆಂದು ಹೇಳಲಿ. ಆರ್ಯಪುತ್ರನ ಮುಖದಿಂದ ಇಷ್ಟುಮಟ್ಟಿಗೆ ಮಾತನಾಡಿಸಿತಲ್ಲಾ !

ವಿದೂ.—ಮಹಾರಾಣಿಯೆ ಮಹಾರಾಜನು ಯುಕ್ತವಾಗಿ ಹೇಳಿರುವನು ; ಅದನ್ನು ಮೀರಿ ನಡೆಯುವದು ನಿನಗೆ ಯುಕ್ತವಲ್ಲ.

ರಾಣಿ.—ಎಲೆ ಕನ್ನೆಯರಿರಾ ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು ಬನ್ನಿ ; ಈ ಉಪ್ಪರಿಗೆಯ ಮೇಲೆ ಪ್ರಸರಿಸಿರುವ ಚಂದ್ರಕಿರಣಗಳನ್ನು ಪೂಜಿಸುವೆನು.

ಚೇಟಿಯರು.—ಮಹಾರಾಣಿಯ ಅಪ್ಪಣೆಯಾದಂತಾಗಲಿ.

( ಎಂದು ಪೂಜಾಸಾಮಗ್ರಿಯನ್ನು ಒಪ್ಪಿಸುವರು)

ರಾಣಿ.—(ಚಂದ್ರಕಿರಣಗಳನ್ನು ಕ್ರಮವಾಗಿ ಪೂಜಿಸಿ) ಎಲೆ ನಿಪುಣಿಕೆ ನೀನೀ ದಿನಕ್ಕೋಸ್ಕರ ತಂದಿರತಕ್ಕ ಮೋದಕಗಳನ್ನು ಭಕ್ಷ್ಯಗಳಲ್ಲಿ ವಿಶೇಷಾಸಕ್ತಿಯುಳ್ಳ ಆರ್ಯನಾದ ಮಾಣವಕನಿಗೆ ತಂದುಕೊಡು.

ಚೇಟಿ.—ಅಪ್ಪಣೆ. (ಎಂದು ಕಡುಬಿನ ತಟ್ಟೆಯನ್ನು ತಂದಿಡುವಳು.)

ಊರ್ವ.—ಈ ರಾಣಿಗೆ ಈ ಬ್ರಾಹ್ಮಣನಲ್ಲಿ ತುಂಬಾ ಬಹುಮಾನವಿರುವ ಹಾಗೆ ತೋರುತ್ತೆ.

ರಾಣಿ.—ಎಲೈ ಪೂಜ್ಯನಾದ ಮಾಣವಕನೆ ಇದು ನಿನ್ನದು, ತೆಗೆದುಕೊಳ್ಳಬೇಕು. (ಎಂದು ಉಪಾಯನವನ್ನು ಕೊಡುವಳು.)

ವಿದೂ.—(ತೆಗೆದುಕೊಂಡು) ಮಹಾರಾಣಿಯೆ ನಿನಗೆ ಮಂಗಳವಾಗಲಿ, ಈ ವ್ರತವು ನಿನಗೆ ಅಧಿಕವಾದ ಫಲವನ್ನು ಕೊಡಲಿ.

ರಾಣಿ.—ಆರ್ಯಪುತ್ರನೆ ಇತ್ತ ಲಾಲಿಸಬೇಕು.

ರಾಜ.—ಇದೋ ಸಿದ್ಧನಾಗಿರುವೆನು.

ರಾಣಿ.—(ನಮಸ್ಕಾರಮಾಡಿ ಕೈಮುಗಿದುಕೊಂಡು) * ರೋಹಿಣೀಸಂಯುತನಾದ ಚಂದ್ರನನ್ನು ಸಾಕ್ಷಿಯಿಟ್ಟುಕೊಂಡು ಆರ್ಯಪುತ್ರನ ಕೋಪವನ್ನು ಪರಿಹರಿಸುವೆನು. ಆರ್ಯಪುತ್ರನು ಯಾವ ಕಾಂತೆಯಲ್ಲಿ ಅನುರಕ್ತನಾಗಿರುವನೋ ಯಾವಳು ಆರ್ಯಪುತ್ರನಲ್ಲಿ ಅತ್ಯಂತ ಅನುರಕ್ತಳಾಗಿರುವಳೋ ಇಂದುಮೊದಲಾಗಿ ಆರ್ಯಪುತ್ರನು ಆಕೆಯಲ್ಲೂ ನನ್ನಲ್ಲೂ ಸಮಾನವಾದ ಪ್ರೇಮದಿಂದಿರಲೆಂದು ಪ್ರಾರ್ಥಿಸುತ್ತೇನೆ.

---

*॥ ರಾಗ—ಭೈರವಿ ॥ ॥ ರೂಪಕತಾಳ ॥

ಚಂದ್ರಕುಲಜನೇ । ದೇ । ವೇಂದ್ರಮಿತ್ರನೇ ॥ ಸಾಂದ್ರಕರುಣಾ ಕೇಳುವಿಗತ । ತಂದ್ರನಾಗಿ ನನ್ನ ನುಡಿಯ ॥ ೧ ॥ ವಂದನೀಯನೇ । ದಯಾರ । ಸುಂದರಾಂಗನೇ ॥ ಇಂದುಸಾಕ್ಷಿಯಾಗಿ ನಾ । ನಿಂದು ಬೇಡಿಕೊಂಬೆ ನಿನ್ನ ॥ ೨ ॥ ನಿನ್ನನಾವಳು । ಮನ । ವನ್ನ ವಂದಳು ॥ ಎನ್ನೊಳವಳೊಳುಂ ಹೀನ । ಭಿನ್ನವೃತ್ತಿಯಿಂದಲಿರದು ॥ ೩ ॥

ಉರ್ವ.—ಇದು ಪರಿಹಾಸ್ಯರವವಾತೋ ಅಥವಾ ನಿಜವೊ ತಿಳಿಯದು ನನಗಂತೂ ನಂಬಿಕೆಸಾಲದು.

ಚಿತ್ರ.—ಮಹಾನುಭಾವಳಾಗಿಯೂ ಪತಿವ್ರತೆಯಾಗಿಯೂ ಇರುವ ಈಕೆ ನಿನ್ನಿಷ್ಟಾರ್ಥವನ್ನು ಅನುಮತಿಸಿರುವಳು. ಇನ್ನುಮೇಲೆ ನಿನಗೆ ಈ ಮಹಾರಾಜನ ಸಮಾಗಮವು ನಿರ್ವಿಘ್ನವಾಗಿ ಉಂಟಾಗುವದು.

ವಿದೂ.—(ರಾಯನನ್ನು ನೋಡಿ ಮರೆಯಾಗಿ) ಮೀನು ಕೈತಪ್ಪಿಸಿಕೊಂಡು ಹೋದಮೇಲೆ ಜಾಣನಾದ ಬೆಸ್ತರವನು ಹೋಗಲಿ ಪುಣ್ಯಬಂತೆಂದು ಹೇಳುವಂತೆ ಈಗ ಮಹಾರಾಣಿ ಹೇಳಿದ್ದೆಲ್ಲಾ ಸಹಜ. (ಪ್ರಕಾಶ) ಮಹಾರಾಣಿಯೆ ಹಾಗಾದರೇನು ನಮ್ಮ ಮಹಾರಾಜನು ಅಂಥಾವನೆ ?

ರಾಣಿ.—ಎಲೈ ಮೂರ್ಖನೆ ನಾನು ಇದೊಂದು ವ್ರತದಿಂದ ಆರ್ಯಪುತ್ರನ ಶರೀರಸಂತಾಪವನ್ನು ಪರಿಹರಿಸಬೇಕೆಂದು ಪ್ರವರ್ತಿಸಿರುವೆನು ಇದರಿಂದ ಆರ್ಯಪುತ್ರನ ಸಂತಾಪವು ಶಾಂತವಾಗಿರುವದೋ ಇಲ್ಲವೋ ತಿಳಿಯದು.

ರಾಜ.—*ಕಂ ॥ ಎನ್ನಂ ಪರಳ್ಗೆಯೊಳ್ಮೇಣ್ ।
ನಿನ್ನವನಂ ಮಾಡಿಕೊಳ್ಳಲುಂ ಪ್ರಭವಿಪೆ ನೀಂ ॥
ಸನ್ನುತಶೀಲಾನ್ವಿತೆ ಯೇ ।
ಕೆನ್ನೊಳ್ ಶಂಕಿಸುವೆ ನಿನ್ನೊಳಾನಂತಲ್ಲಂ ॥ ೧೪ ॥

ರಾಣಿ.—ಹಾಗಿರಲಿ ಇಲ್ಲದೇಇರಲಿ, ನನ್ನ ವ್ರತವಂತೂ ನೆರವೇರಿತು ; ಎಲೆ ಚೇಟಿಯರಿರಾ ಬನ್ನಿಬನ್ನಿ ಹೋಗೋಣ.

ರಾಜ.—(ಎದ್ದುಬಂದು ತಡೆದು) ಎಲೆ ಪ್ರಿಯೆ ಹೀಗೆ ಬಿಟ್ಟು ಹೋದರೆ ನನ್ನನ್ನು ನೀನು ಪ್ರಸನ್ನನನ್ನು ಮಾಡಿದ್ದೇ ಸುಳ್ಳಾಗುವದಿಲ್ಲವೆ ?

---

*॥ ರಾಗ—ಸುರಟಿ ॥ ॥ ಆದಿತಾಳ ॥

ಭಾಮಿನೀ ಥೀರುವೇ ॥ ಪ ॥ ಎ ಅಂಜದಿರುವುದೆ ಕಾ । ಳಂಜವು ನನ್ನೊಳು ॥ ಶಂಕೆಪಡದಿರು । ಪಂಕಜಮುಖಿ ॥ ೧ ॥ ಎ ಬಹತಿಯು ನೀನೇ । ಪ್ರೇಮದಲಿಗೆ ಭೋಗಿಸೆ ॥ ಕೋಪಿಸುವಾ ಪರ । ಮಹದಿಯಳಿಗೆ ॥ ೨ ॥ ಎ ಕನಸಿನೊಳುಂ ಪರ । ವನಿತೆಯ ನೋಡುವ ॥ ನನ್ನ ನಾಂ ನುಡಿ ನೀಂ । ಮನವನ್ನಿಡು ॥ ೩ ॥

ರಾಣಿ.—ಆರ್ಯಪುತ್ರನೆ ಯಾವಾಗಲಾದರೂ ನಾನು ವ್ರತನಿಯಮವನ್ನು ಮೀರಿ ನಡೆಯುವದುಂಟೆ ? (ಎಂದು ಹೇಳುವದರೊಡನೆ ತೆರಳಿದಳು.)

ಊರ್ವ.—ಎಲೆ ಚಿತ್ರಲೇಖೆ ಈ ರಾಯನು ಪತ್ನಿಯಲ್ಲಿ ಬಹಳ ಪ್ರೀತಿಯುಕ್ತನಾಗಿರುವನು, ಆದರೂ ಈತನಲ್ಲಿ ಸೇರಿರತಕ್ಕ ನನ್ನ ಮನಸ್ಸನ್ನು ನಾನು ಹಿಂತಿರುಗಿಸಲಾರೆ.

ಚಿತ್ರ.—ಇದೇನು ನೀನು ನಿರಾಶಳಾಗಿ ಯೋಚಿಸುವದು ?

ರಾಜಂ.—(ಪೀಠದಲ್ಲಿ ಕುಳಿತುಕೊಂಡು) ಮಿತ್ರನೆ ದೇವಿ ಇನ್ನೂ ದೂರ ಹೋಗಿರಲಾರಳಲ್ಲವೆ ?

ವಿದೂ.—ಮಹಾರಾಜನೆ ವೈದ್ಯನು ರೋಗವು ಅಸಾಧ್ಯವೆಂದು ತಿಳಿದು ರೋಗಿಯನ್ನು ಅವನ ಇಷ್ಟಾನುಸಾರವಾಗಿ ಬಿಟ್ಟುಬಿಡುವಂತೆ ನಿನ್ನ ಭ್ರಾಂತಿಯನ್ನು ತಪ್ಪಿಸುವದು ಅಸಾಧ್ಯವೆಂದು ತಿಳಿದು ಮಹಾರಾಣಿಯು ನಿನ್ನನ್ನು ಸ್ವಚ್ಛಂದವಾಗಿ ಬಿಟ್ಟುಬಿಟ್ಟಿರುವಳು. ಇನ್ನು ನೀನು ಹೇಳಬೇಕಾದ ಸಂಗತಿಯನ್ನು ಸ್ವಲ್ಪವೂ ಅಳುಕದೆ ಹೇಳು.

ರಾಜಂ.—ಈಗ ಊರ್ವಶಿಯು.

ಊರ್ವ.—ಈಗ ನಾನು ಕೃತಾರ್ಥಳು.

ರಾಜಂ.—

ವೃ ॥ ಕಿವಿಯೊಳದೊಮ್ಮೆ ಬೀಳ್ವಳೆ ತಾಂ ಮರೆಗೊಂಡು ಲತಾಂಗಿ ನೂಪುರಾ ।
ರವಮನದೊಮ್ಮೆ ಹಿಂದೆ ನಡೆತಂದು ತಳಿರ್ಗೈಯಿಂದಮಾದ ಕಣ್ಗಳಂ ॥
ತವಕದೊಳೆನ್ನ ಕಣ್ಗಳನೆ ಮುಚ್ಚುವಳೇ ಸಖಿಯೆನ್ನ ಭಾಗ್ಯದಿಂ ।
ದವಳನದೊಮ್ಮೆ ಯೆಯ್ದಿಪಳೆ ತಾಕರುಣಾಪವನೊಯ್ಯನೊಯ್ಯನೇ ॥

ಊರ್ವಶಿ.—ಎಲೆ ಚಿತ್ರಲೇಖೆ ಮಹಾರಾಜನ ಈ ಮನೋರಥವನ್ನು ನೆರವೇರಿಸುವೆನು.

(ಎಂದು ಅದೃಶ್ಯಳಾಗಿಯೇ ಹಿಂದೆ ಬಂದು ರಾಯನ ಕಣ್ಣು ಮುಚ್ಚುವಳು).

ಚಿತ್ರ.—(ಪ್ರತ್ಯಕ್ಷವಾಗಿ ಗುಟ್ಟಾಗಿ ವಿದೂಷಕನನ್ನು ಕುರಿತು "ಈಗ ನಿನ್ನ ಕಣ್ಣು ಮುಚ್ಚಿದವರು ಯಾರು" ಎಂದು ರಾಯನನ್ನು ಕೇಳುವಂತೆ ಸನ್ನೆ ಮಾಡುವಳು).

ವಿದೂ.—ಮಹಾರಾಜನೆ ನಿನ್ನ ಕಣ್ಣುಮುಚ್ಚಿದವರು ಯಾರು ?

ರಾಜ.—(ಸ್ಪರ್ಶಸುಖವನ್ನು ನಟಿಸಿ) ಮಿತ್ರನೆ ಇನ್ನಾರು ? ನಾರಾಯಣನೊಡಪ್ಪಿಗಾಯ ಶರೀರದಲ್ಲಿ ಹುಟ್ಟಿದ ಆ ಊರ್ವಶಿಯೇ—ಕೇಳು.

ಕಂ ॥ ಇನ್ನಾವಳ್ ಕರಯೋಗ್ಯಂಕಿನೊ ।
ಶನ್ನಿಂ ಸ್ಮರತಪ್ತದೇಹಮಂ ತಂಪಿಸುವಳ್ ॥
ಕನ್ನೈದಿಲೆಗೆ ವಿಕಾಸಂ ।
ಜೊನ್ನದಿನಪ್ಪಂತಿರದಪ್ಪುದೇ ನಾಳಕದಿಂ ॥ ೧೬ ॥

(ಎಂದು ಆಕೆಯ ಕೈಯನ್ನು ಹಿಡಿದುಕೊಂಡು ಎದ್ದು ಊರ್ವಶಿಯನ್ನು ಆಲಿಂಗಿಸುವನು).

ಊರ್ವ.—(ಸ್ವಲ್ಪ ಹಿಂಜರಿದು ಎದುರಿಗೆ ಬಂದು) ಮಹಾರಾಜನಿಗೆ ಜಯವಾಗಲಿ.

ಚಿತ್ರ.—ಮಹಾರಾಜನಿಗೆ ಸುಖವೆ ?

ರಾಜ.—ಈಗ ನೀನು ಹೀಗೆ ಕೇಳುವುದು ಸರಿಯಾಗಿದೆ.

ಊರ್ವ.—ಎಲೆ ಚಿತ್ರಲೇಖೆ ಮಹಾರಾಜನನ್ನು ರಾಣಿಯೇ ನನಗೊಪ್ಪಿಸಿರುವಳು. ಆದ್ದರಿಂದ ನಾನೀತನ ವಿಷಯದಲ್ಲಿ ಇಷ್ಟು ಸ್ವಾತಂತ್ರ್ಯವನ್ನು ನಡೆಸಿದೆನು. ನನ್ನನ್ನು ವಿರುದ್ಧವಾಗಿ ತಿಳಿಕೊಂಡು ನೀನೆಣಿಸಬೇಡ.

ವಿದೂ.—ಹಾಗಾದರೇನು ನೀವು ಸೂರ್ಯಾಸ್ತಮಯಕ್ಕೆ ಮುಂಚಿತವಾಗಿಯೇ ಇಲ್ಲಿಗೆ ಬಂದಿರೊ ? ಸರಿ ಸರಿ !

ರಾಜ.—(ಊರ್ವಶಿಯನ್ನು ನೋಡಿ)

ಕಂ ॥ ಎನಗಿತ್ತಳ್ ದೇವಿಯೆ ತಾ ।
ನೆನೆಸುತುಪಭೋಗಿಸುವೊಡೆನ್ನ ತನುವಂ ನೀನಾ ॥
ರನುಮತಿಯಿಂ ಪೊಂದಲೆನ್ನಯ ।
ಮನಮಂ ನೆರೆಕೊಂಡ ಪೆರ್ಚ್ಚುಯೊಳೇರುಹನವಳೇ ॥ ೧೭ ॥

ಚಿತ್ರ.— ಮಹಾರಾಜನೆ ಈ ಮಾತಿಗೆ ಇವಳೇನುತ್ತರ ಹೇಳುವಳು? ನನ್ನದೊಂದು ವಿಜ್ಞಾಪನೆಯನ್ನು ಲಾಲಿಸಬೇಕು.

ರಾಜಂ.— ಅದೇನು ಹೇಳು, ಕೇಳುವೆನು.

ಚಿತ್ರ.— ವಸಂತಋತು ಕಳೆದಮೇಲೆ ಬೇಸಿಗೆಕಾಲದಲ್ಲಿ ನಾನು ಸೂರ್ಯೋಪಾಸನೆಗೋಸ್ಕರ ಹೋಗಬೇಕಾಗಿರುವದರಿಂದ ಈ ನನ್ನ ಸಖಿಯು ಯಾವದಾದರೂ ನಿಮಿತ್ತದಿಂದ ಅಯ್ಯೋ! ಸ್ವರ್ಗವನ್ನು ಬಿಟ್ಟುಬಂದೆನಲ್ಲಾ! ಎಂದು ಅಂದುಕೊಳ್ಳದಹಾಗೆ ಈಕೆಯನ್ನು ನೀನು ಆದರಿಸಿಕೊಂಡಿರಬೇಕು.

ವಿದೂ.— ಏನೆಂದೆ! ಸ್ವರ್ಗವನ್ನೇಕೆ ನೆನಸುವಳು? ಅಲ್ಲೇನಿದೆ! ಅಲ್ಲಿರತಕ್ಕವರಿಗೆ ಆಹಾರಕ್ಕೇ ಗತಿಯಿಲ್ಲದೆ ಎಲ್ಲರೂ ಮೀನುಗಳಂತೆ ಸರ್ವದಾ ಕಣ್ಣುಬಿಟ್ಟುಕೊಂಡಿರುವದೇ ಪುರುಷಾರ್ಥವಾಗಿರುವ ಲೋಕದಲ್ಲಿ ಮಿಟಿಮಿಟಿಸ್ವರ್ಗವೆಂದು ಜನರು ಹೇಳುವರು.

ರಾಜಂ.— ಎಲೆ ಸಖಿಯೆ—

ಅಗಣಿತವೆನಿಸಿದಸಗ್ಗದ ।
ಸೊಗಮುಮಂಮರೆಸಲ್ಕದಾವನಾಪ್ಸರ್ಗಂಕೇಳ್
ಮುಗುದೆಗೆಪುರೂರವಂ ತಾಂ ।
ಮಿಗಿಲೆನೆಪರಿಕಿಂಬಿರಿಂದೆ ದಾಸಪ್ರಾಯಂ ॥ ೧೯ ॥

ಚಿತ್ರ.— ನಾನು ಕೃತಾರ್ಥಳಾದೆನು. ಎಲೆ ಊರ್ವಶಿ ಇನ್ನು ಭಯಪಡಬೇಡ. ನನ್ನನ್ನು ಕಳುಹಿಸಿಕೊಡು.

ಊರ್ವ.— (ಚಿತ್ರಲೇಖೆಯನ್ನು ಆಲಿಂಗಿಸಿ) ಎಲೆ ಸಖಿ ನನ್ನನ್ನು ಮರೆಯಬೇಡ.

ಚಿತ್ರ.— (ನಸುನಗುತ) ಮಹಾರಾಜನೊಡಗೂಡಿದ ನಿನ್ನ ಸಂಗಡ ನಾನಾಡತಕ್ಕ ಮಾತನ್ನು ನನ್ನ ಸಂಗಡ ನೀನೇ ಆಡಿದೆಯಾ?

(ಎಂದು ರಾಜನಿಗೆ ವಂದಿಸಿ ಹೋದಳು).

ವಿದೂ.—ಮಹಾರಾಜನೆ ದೈವಯೋಗದಿಂದ ನಿನ್ನ ಸ್ವಾರ್ಥ ಕೈಗೂಡಿ ತಲ್ಲವೆ ?

ರಾಜಂ.—ಮಿತ್ರನೆ ಕೇಳು—

ಕಂ॥ ಎಂತಾಂ ಕೃತಾರ್ಥನೀಸುರ ।
ಕಾಂತೆಯಮೆಲಾಘದಿ ಕೃತಾರ್ಥನಂತಲ್ಲಂ ಸಾ ॥
ಮಂತಕಿರೀಟಮಣೀರುಚಿ ।
ದಂತುರಪದಪೀಠವೆನಿಸುವ ಸಾಮ್ರಾಜ್ಯದೊಳಂ ॥ ೧೯ ॥

ಊರ್ವ.—ಇದಕ್ಕಿಂತಲೂ ಮೇಲಾದ ಪ್ರಿಯವಚನವನ್ನು ಹೇಳುವಷ್ಟು ವಚನ ಸಂಪತ್ತು ನನಗಿಲ್ಲ.

ರಾಜಂ.—(ಊರ್ವಶಿಯ ಕೈ ಹಿಡಿದು) ಆಃ ಇಷ್ಟಾರ್ಥಲಾಭವೆಂಬುವದು ಪ್ರತಿಕೂಲವಾಗಿದ್ದದ್ದನ್ನು ಅನುಕೂಲ ಪಡಿಸುವದು.

ಕಂ॥ ಸುತನುವೆ ನಿನ್ನ ವಿಯೋಗದೊ ।
ಳತಿತಾಪವ ನೆಸಗುತಿರ್ದ ಚಂದ್ರನ ಕರಮುಂ ॥
ರತಿಪತಿಯ ನಿಶಿತಶರಮುಂ ।
ಹಿತಕಾರಿಗಳಾದುವರಸಿ ನಿನ್ನಂ ಸೇರಲ್ ॥ ೨೦ ॥

*ಊರ್ವ.—ರಾಜೇಂದ್ರನೆ ಇದುವರೆಗೂ ತಡಮಾಡಿ ನಾನು ನಿನಗೆ ಆಯಾಸವನ್ನುಂಟುಮಾಡಿದ್ದರಿಂದ ಅಪರಾಧವಂತಳಾಗಿದ್ದೇನೆ.

ರಾಜಂ.—ಎಲೆ ಸುಂದರಿ ಹಾಗಲ್ಲ ಹಾಗಲ್ಲ ಕೇಳು.—

---

* ॥ ರಾಗ—ಶ್ಯಾಮಕಲ್ಯಾಣಿ ॥ ॥ ಆದಿತಾಳ ॥

ರಾಜೇಂದ್ರನೇ । ಮನ್ನಿಸು ॥ ಪ ॥ ಸ್ಮರರೂಪ ಜೀವೇ । ಶ್ವರ ನಿನ್ನ ಸೇರಲೀ ॥ ಪರಿಗು ತಡವ ಮಾ । ಡಿರುವಪರಾಧವ ॥ ೧ ॥ ಧರಣೀಶನಾಂ ಮೊದಲ್ । ಸುರರಾಜ ನಾಜ್ಞೆಯಿಂ ॥ ಬಿರದೆ ನಿನ್ನಂ ಬಿಟ್ಟು । ತೆರಳ್ದಪರಾಧವ ॥ ೨ ॥ ವಸುಧಾ ಮಹೇಂದ್ರನೇ । ಕುಸುಮಾಸ್ತ್ರನಿಭನೇಂ ॥ ಬಿಸವೊಳ್ಪೋಲ್ತಿರ । ಚೆಸಿದಪರಾಧವ ॥ ೩ ॥

ಕಂ ॥ ಪಿರಿದುಂ ದುಃಖವನಾಂತಗೆ ।
ದೊರೆದಾಸುಖಮೇ ವಿಶೇಷಸುಖಮೆಂದೆನಿಕುಂ ॥
ಮರಗಿನೆಳಲ್ ಕಡುವಿಸಿಲಿಂ ।
ಪರಿತಪಿಸಿದವಂಗೆ ತೀವ್ರಸುಖಕರಮಲ್ತೇ ॥ ೨೧ ॥

ವಿದೂ.—ಮಹಾರಾಜನೆ ಮನೋಹರವಾದ ಚಂದ್ರಕಿರಣಗಳನ್ನು ಸೇವಿಸಿದ್ದಾಯಿತು; ಇನ್ನು ನೀನು ಅರಮನೆಯನ್ನು ಪ್ರವೇಶಿಸುವದಕ್ಕೆ ಸಮಯವಲ್ಲವೆ ?

ರಾಜಂ.—ಹಾಗಾದರೆ ಇನ್ನು ನಿನ್ನ ಸಖಿಗೆ ಮಾರ್ಗವನ್ನು ತೋರಿಸು.

ವಿದೂ.—ಇತ್ತಲಿತ್ತಲ್ ಪೂಜ್ಯಳು.

ರಾಜಂ.—ಎಲೆ ಸುಂದರಿ ಈಗ ನನ್ನ ಪ್ರಾರ್ಥನೆ—ಇದು.

ಊರ್ವ.—ಅದೇನು ?

ರಾಜಂ.—ಕೇಳು.—

ಕಂ ॥ ಮೊದಲಿಪ್ರಾರ್ಥಂಕಳದ್ದೇ ।
ರತಿ ಶತಗುಣಮೆನಿಸಿ ಪೆಾಯ್ದು ಪೊಂದೊಂದಿರುಳುಂ ॥
ಪದುಳದೆ ಕಳಾಂಕಮೆಂದೆನಿ ।
ಸಿದೊಡವ್ರನಿನ್ನೊಂದುಗೂಡಿದೆನ ಗಾಂಧರ್ವಂ ॥ ೨೨ ॥

---

* ॥ ರಾಗ—ಬೆಹಾಗ್ ॥ ॥ ಮಿಶ್ರಝಾಪ್ತಾಳ ॥

ಸುಂದರಾಂಗಿಯೆ । ಚಂದಿರಮುಖಿಯೇ ॥ ಪ ॥ ಇಂದುಮಾನು ನಿನ್ನನ್ನಿಂತಾ । ನಂದದಿಂದ ಸಂಪ್ರಾರ್ಥಿಸೆನು ॥ ಅ ॥ ಅಗಲಿನಿನ್ನ ನಡಾವಿರುಳೆಂದು । ಯುಗದೊಲಾದುದು ತಾನದುಬಿಂದು ॥ ಸುಗುಣಿನಿನ್ನನು ಸೇರಲಾಗಿಂದು । ಮಿಗೆ ಸಂಪ್ರಾರ್ಥಿಪೆ ಅಂತಾಗಲೆಂದು ॥ ೧ ॥ ಪರಮಮಗ್ನನಿ ನಾರಾಯಣಜಾತೆ । ದೊರೆಯೆನ್ನಯ ಕರುಣಾಪ್ರಭರಿತೆ ॥ ವಿರಹಿಸಿದುವೆನ್ನಯ ಪುಣ್ಯಲತೆ । ಧರೆಯೊಳ್ಪಡೆದಿದಿಗ ಕಾಂತೇ ॥ ೨ ॥ ಇಂದಾಕಾಮಿನಿ ನೀನೆನ್ನ ಸೇರೆ । ಕುಂದಿತೆನ್ನಯ ತಾಪವು ಚದುರೆ ॥ ಪೊಂದುತಾನಂದದ ನೀರೆ । ಮುಂದಗಾಮಿನಿ ಪೋಪವು ಬಾರೇ ॥ ೩ ॥

ಮೂರನೆಯ ಅಂಕವು ಮುಗಿದುದು.

# ಚತುರ್ಥಾಂಕಂ.

---

(ಸಹಜನ್ಯಾ ಚಿತ್ರಲೇಖೆಯರು ವಿಷಣ್ಣಾಕಾರಯುತರಾಗಿ ಬರುವರು)

ಸಹ.—(ಚಿತ್ರಲೇಖೆಯನ್ನು ನೋಡಿ) ಎಲೆ ಚಿತ್ರಲೇಖೆ ನಿನ್ನ ಮುಖವು ಬಾಡಿದ ತಾವರೇಹೂವಿನಂತೆ ಮಲಿನವಾಗಿರುವದು ; ಇದನ್ನು ನೋಡಿದರೆ ನಿನ್ನ ಮನಸ್ಸಿನಲ್ಲೇನೋ ದುಃಖವಿರುವಂತೆ ತೋರುವದು ; ಅದೇನು ನನ್ನ ಸಂಗಡ ಹೇಳಕೂಡದೊ ?

ಚಿತ್ರ.—ಎಲೆ ಕೆಳದಿ ಯಾವಾಗಲೂ ಊರ್ವಶಿಯಸಂಗಡ ಸೂರ್ಯೋಪಾಸನೆಗೆ ಬರುತ್ತಿದ್ದು, ಈಬಾರಿ ನಿನ್ನಸಂಗಡ ಬಂದಿರುವ ನನಗೆ ಊರ್ವಶಿಯ ಜ್ಞಾಪಕ ಬಂದು, ತುಂಬಾ ಕಳವಳವುಂಟಾಗಿರುವದು.

ಸಹ.—ನಿಮ್ಮ ಅನ್ಯೋನ್ಯವಾದ ಪ್ರೇಮಾತಿಶಯವನ್ನು ನಾನು ಚೆನ್ನಾಗಿ ಬಲ್ಲೆ ; ಆಮೇಲೆ ?

ಚಿತ್ರ.—ಈಗ ನನ್ನ ಸಖಿಯ ವಿಶೇಷವೃತ್ತಾಂತವೇನೆಂದು ಧ್ಯಾನದೃಷ್ಟಿಯಿಂದ ನೋಡಲು, ಆಕೆಯು ಬಹಳ ಕಷ್ಟಕ್ಕೆ ಸಿಕ್ಕಿರುವಳೆಂದು ತಿಳಿದು ಬಂತು.

ಸಹ.—(ಕಳವಳಪಟ್ಟು) ಅದೇನು ? ಹೇಳು ಹೇಳು.

ಚಿತ್ರ.—ನನ್ನ ಪ್ರಿಯಸಖಿಯಾದ ಊರ್ವಶಿಯು ಕ್ರೀಡಾಸಕ್ತನಾಗಿ ಮಂತ್ರಿಗಳಲ್ಲಿ ರಾಜ್ಯಭಾರವನ್ನು ನೇಮಿಸಿದ ಮಹಾರಾಜನಾದ ಪುರೂರವನನ್ನು ಸಂಗಡ ಕರೆದುಕೊಂಡು ಹೋಗಿ, ಗಂಧಮಾದನಪರ್ವತದ ಮನೋಹರವಾದ ಪ್ರದೇಶಗಳಲ್ಲಿ ವಿಹರಿಸುತ್ತಿದ್ದಳು.

ಸಹ.—ಅಂಥಾ ಪ್ರದೇಶಗಳಲ್ಲಿ ಅನುಭವಿಸತಕ್ಕದ್ದೇ ಸಂಭೋಗವೆನ್ನಿಸುವದು ; ಆಮೇಲೆ ?

ಚಿತ್ರ.—ಹೀಗಿರುವಲ್ಲಿ ಆ ಮಹಾರಾಜನು ಒಂದುದಿವಸ ಗಂಗಾತೀರದಲ್ಲಿ ಮರಳುಗುಡ್ಡೆಗಳಮೇಲೆ ಆಟವಾಡುತ್ತಿದ್ದ ಉದಯವತಿಯೆಂಬ ವಿದ್ಯಾ

ಧರಕನ್ಯೆಯನ್ನು ಕ್ಷಣಕಾಲ ದೃಷ್ಟಿಸಿನೋಡಿದನೆಂದು ನನ್ನ ಸಖಿಯು ಕೋಪಿಸಿಕೊಂಡಳು.

ಸಹ.—ನಿಜ, ಪ್ರಿಯನಲ್ಲಿ ಪ್ರೇಮವು ಮಿತಿಮೀರಲು ಸ್ತ್ರೀಯರಿಗೆ ಹೀಗೆಲ್ಲಾ ಅಸಹನವುಂಟಾಗತಕ್ಕದ್ದು ಸಹಜವೇಸರಿ ; ಮುಂದೇನು ?

ಚಿತ್ರ.—ಮುಂದೆ ಆ ರಾಜರ್ಷಿಯು ಎಷ್ಟು ಸಮಾಧಾನಮಾಡಿದಾಗ್ಯೂ ಕೇಳದೆ ಗುರುಶಾಪದಿಂದ ಮೂಢಳಾದ ನನ್ನ ಸಖಿಯು ಅಪ್ಸರಸ್ತ್ರೀಯರಾದ ನಾವು ಯಾರೂ ಪ್ರವೇಶಮಾಡಕೂಡದ ಕುಮಾರವನವನ್ನು ಪ್ರವೇಶಿಸಿದಳು ; ಅಲ್ಲಿ ಪ್ರವೇಶಮಾಡಿದ ಕೂಡಲೇ ಒಂದು ಲತೆಯಾಗಿಬಿಟ್ಟಳು.

ಸಹ.—ಹಾಹಾ ! ದೈವಗತಿ ಮೀರತಕ್ಕದ್ದಲ್ಲ. ಆ ರಾಯನಿಗೂ ಊರ್ವಶಿಗೂ ಇದ್ದ ಅರೀತಿಯಾದ ಅನುರಾಗಕ್ಕೆ ಅಕಸ್ಮಾತ್ತಾಗಿ ಈ ಪಾಡು ಬಂತೆ ! ಮಾಡತಕ್ಕದ್ದೇನು ! ಆಮೇಲೆ ಆ ರಾಜನ ಪಾಡೇನಾಯಿತು ?

ಚಿತ್ರ.—ಆ ರಾಜನು ಆ ವನಭಾಗದಲ್ಲಿ ಊರ್ವಶಿಯನ್ನೇ ಹುಡುಕುತ್ತ ಹುಚ್ಚುಹಿಡಿದವನಂತೆ ಕಾಲಹರಣ ಮಾಡುತ್ತಿರುವನು ; ಇದರಮೇಲೆ ಸುಖಿತರಾದವರಿಗೂ ಮನೋವಿಕಾರವನ್ನುಂಟುಮಾಡತಕ್ಕ ಈ ಮೇಘೋದಯವೊಂದುಂಟಾಗಿರುವದು ; ಇದನ್ನು ನೋಡಿದಮೇಲೆ ಇನ್ನೇನು ಅನರ್ಥವುಂಟಾಗುವದೋ ತಿಳಿಯದು.

ಸಹ.—ಸಜ್ಜನರಿಗೆ ಬಂದ ದುಃಖ ಬಹುಕಾಲ ನಿಲ್ಲುವದಿಲ್ಲ ; ಆದಕಾರಣ ಯಾವದಾದರೂ ಒಂದು ದೇವತಾನುಗ್ರಹದಿಂದ ಅವರಿಬ್ಬರೂ ಸೇರುವದರಲ್ಲಿ ಸಂದೇಹವಿಲ್ಲ ; (ಪೂರ್ವದಿಕ್ಕನ್ನು ನೋಡಿ) *ಓಹೋ ! ಬೆಳಗಾಯಿತು ;

---

* ರಾಗ—ಪೂರ್ವಕಲ್ಯಾಣಿ ॥ ॥ ಆದಿತಾಳ ॥

ಬೆಳಗಾಯಿತೀಗ । ನಸುನಾಯತಾಕ್ಷಿ ॥ ಪ ॥ ಮೂಡುವಕನ ಕಾಂತಿ । ಮೂಡಣದೆಸೆಯೊಳು ॥ ನಾಚಿರಂಜಿಪುದನು । ನೋಡುನೋಡಿತ್ತ ನೀಂ ॥ ೧ ॥ ಅರಳಿದಪೊಸಕುಸು । ಮರಗಳ ದಂಡುಳ ॥ ಭರದನುಶಾಲಿ ಸಂ । ಚರಿಸುದು ತಂಗಾಳಿ ॥ ೨ ॥ ಕುಮುದ ವನವ ಬಿಟ್ಟು । ಕಮಲವನಕೆ ಬಹ ॥ ಭ್ರಮರಗಳಿಂತಿವ ಸಂ । ಭ್ರಮವಿದೊತೋರ್ಪುದು ॥ ೩ ॥

ನಡೆ ಇನ್ನು ಸೂರ್ಯೋಪಾಸನೆಗೆ ಹೋಗೋಣ ಉದಯಕಾಲ ಮೀರಿತು.

(ಎಂದು ತೆರಳುವರು.)

(ಇಂತಿದು ಪ್ರವೇಶಕವು).

(ಬಳಿಕ ರಾಜನು ಉನ್ಮತ್ತವೇಷದಿಂದ ಪ್ರವೇಶಿಸುವನು.)

ರಾಜಂ.—(ನಿಟ್ಟುಸುರುಬಿಟ್ಟು) *ನನ್ನ ಪ್ರಿಯೆಯನ್ನು ಎಂದಿಗೆ ನೋಡೇನು. (ಆಕಾಶವನ್ನು ನೋಡುತ್ತ ಕೋಪದಿಂದ) †ಎಲವೆಲವೋ ದುರಾತ್ಮನಾದ ರಾಕ್ಷಸನೆ ನಿಲ್ಲುನಿಲ್ಲು ; ನನ್ನ ಪ್ರಾಣಕಾಂತೆಯನ್ನು ತೆಗೆದುಕೊಂಡು ಎಲ್ಲಿಹೋಗುವೆ? ಓಹೋ! ಇದೇನು ಪರ್ವತಶಿಖರದಿಂದ ಆಕಾಶಕ್ಕೆ ನೆಗೆದು ಧನುಸ್ಸನ್ನೆಳೆದು ನನ್ನ ಮೇಲೆ ಬಾಣವೃಷ್ಟಿಯನ್ನು ಕರೆಯುವನು!

(ಹಾಗೇ ನೋಡಿ ದುಃಖದಿಂದ)

ವೃತ್ತ ॥ ಇದುಪ್ರೋಷಕಾಮುಗಿಲೆದುರ್ಳ ರಕ್ಕಸನಲ್ತು ಸುರೇಂದ್ರಚಾಪವಿಂ ।
ತುದಯಿಸಿತೋರ್ಕ್ಕುಗಮಲ್ಲದೆ ಮಹತ್ತರಮಪ್ಪ ಧನುಸ್ಸಿದಲ್ತು ಬಾ ॥
ಣದಸರಿಯಲ್ತಿ ದಾಗಸದೆ ಬೀಳ್ವ ನಿರಂತರವಾರಿಧಾರೆಯು ।
ಲ್ಲದೆ ಕನಿಮಿಂಚುಮಿಂಚುವುದು ಪೊನ್ನರೆಯಂತಿರೆ ಕಾಂತೆಯಲ್ತಿದಂ ॥

(ಯೋಚಿಸಿ) ಈಗ ಊರ್ವಶಿ ಯೆಲ್ಲಿತಾನೇ ಹೋಗಿರಬಹುದು—

---

* ರಾಗ—ತೋಡಿ ॥ ॥ ರೂಪಕತಾಳ ॥

ಎಂದುನೋಳ್ಪೆನು । ಪೂ । ರ್ಣೇಂದುಮುಖಿಯನು ॥ ಪೊಂದಿಮುದವನು । ನಾ । ನೆಂದು ಸುಖಿಪೆನು ॥ ೧ ॥ ವಿರಹದುರಿಯನು । ಸೈಸ । ಲರಿಯೆನೀತನು ॥ ಸ್ಮರನಸರಳಿಯನು । ದಿ । ಕ್ಕರಿಸುವೆನಿಯನು ॥ ೨ ॥ ದಹಿಸುತಿರುವನು । ಮ । ನ್ಮಥನು ಮನವನು ॥ ಪ್ರಥಿತಗುಣೆಯನು । ನೋಳ್ಪ । ಪಥವನರಿಯೆನು ॥ ೩ ॥

† ಸೋಟು ॥ ರಾಗ—ಬಿಲಹರಿ ॥ ॥ ಏಕತಾಳ ॥

ನಿಲ್ಲುನಿಲ್ಲು ಖುಲ್ಲನೇ । ನೆಲ್ಲಿಗೈದುವೆ ॥ ಪಲ್ಲವಾಧರೆಯ ನಿನ್ನ ನಿಮಿಷ । ದಲ್ಲಿ ಕೊಲ್ಲುವೆ ॥೧॥ ಕಾಣದಂತೆ ಕೊಂಡುಪ । ತ್ಪ್ರಾಣಕಾಂತೆಯಾ ॥ ಕೋಣವಾಧ್ವಮನಿಂ ಪ್ರ । ಯಾಣ ಗೈವೆಯಾ ॥ ೨ ॥ ಸರಸಿಜಾಕ್ಷಿಯನ್ನು ಬಿಟ್ಟು । ತೆರಳಪೋಳ್ವೆಯಾ ॥ ದುರುಳಸೇಳ್ವ ಭರದ ನಿನ್ನ । ಹರಣವೀವೆಯಾ ॥ ೩ ॥

ವೃ॥ ಮುನಿಸಿಂದೊಯ್ಯನೆ ದಿವ್ಯದೊರ್ಗಡಂ ಮುಚಿ ಮೆಯ್ಯಿಂ ತಾನೀಸು ಪ್ರೊಳ್ತನ್ನನಾ ।
ಯಿನಿಸುಂ ಕಟ್ಟಿರಳೆನ್ನ ಮುಂದೆ ಸುರರೊಡ್ಯುಲ್ಲಾಕ್ಷ ದ್ವರ್ಗಂ ಪಾಠಕಯುಂ ॥
ಅನುರಾಗಂ ಪಿರಿದೆನ್ನೊಳಾಕೆಗದರಿಂ ನಾಕಾಲಯಂ ಪ್ರೇಕ್ಷಳ ।
ಲ್ತನವದ್ಯಾಂಗಿ ಯದೃಶ್ಯೆಯಾದಳ್ ಕಟಾಕ್ಷೈ ವೀಕ್ಷ್ಮೆಯೇಂ ಚಿತ್ರಮೋ ॥

(ದಿಕ್ಕುಗಳನ್ನು ನೋಡಿ) ಅಯ್ಯೋ! ನಮ್ಮಂಥಾ ಪುಣ್ಯಹೀನರಿಗೆ ದುಃಖದ ಮೇಲೆ ದುಃಖಬರತಕ್ಕದ್ದು ಸ್ವಭಾವ—

ಕಂ॥ ಬಂದುದು ವಿರಹವ್ಯಥೆಯಾ ।
ಸುಂದರಿಯುಂ ಕಾಣದೆನಗೆ ಮೋಹದರೊಡನೈ ॥
ತಂದುದು ಮಿರುಗುವ ತಂಬೆಸಿ ।
ಲಿಂದಂ ಮೊಳಗಿಂದವಾದ ಮಸಿಮೀದಿನವುಂ ॥ ೩ ॥

ಆಹ! ನನ್ನ ಸಂತಾಪವನ್ನು ನಾನೇ ವ್ಯರ್ಥವಾಗಿ ಉದ್ದೀಪಿಸಿಕೊಂಡಿರುವೆನು. "ರಾಜಾ ಕಾಲಸ್ಯ ಕಾರಣಂ" ಎಂದು ಮಹಾತ್ಮರಾದ ಮುನಿಗಳು ಹೇಳುತ್ತಿರುವರಷ್ಟೆ? ಈಗ ಈ ವರ್ಷಾಕಾಲವನ್ನು ನಾನು ಯಾತಕ್ಕೆ ನಿವಾರಣೆಮಾಡಕೂಡದು? (ನೋಡಿ) ಒಂದುವೇಳೆ ಇದನ್ನು ಯಾತಕ್ಕೆ ನಿವಾರಿಸಲಿ; ಈ ವರ್ಷಾಕಾಲದಲ್ಲಿ ಉಂಟಾಗತಕ್ಕ ಚಿಹ್ನೆಗಳಿಂದಲೇ ನನಗೆ ರಾಜೋಪಚಾರವಾಗುತ್ತಿರುವದು. ಇದೋ ಈಗ,—

ವೃತ್ತ॥ ಸೆಳೆಮಿಂಚೊಪ್ಪೆ ಸುವರ್ಣಚಿತ್ರಮೆನೆ ಮೇಘಶ್ರೇಣಿ ಚಂದ್ರಾತಪಂ ।
ಬೆಳತೋರ್ಪೇತಸಗುಚ್ಛಮಕ್ಕು ಮೆಸಗುಂ ಭೃತ್ಯಾಳ್ವ ಮೊಳಂಪಾಂಚರಂ ॥
ಕಳಯಲ್ ಬೇಸಿಗೆನೊಣ್ಪುರಂಬಡೆದು ನೊಕ್ಕಿಟ್ಟೀಗ ನವಿಲ್ಗಳೊಳ್ಪಾಗ ।
ಳ್ಕೆಳಗಳ್ ಪಾಡಿದವೈಕ್ಯರಿತ್ತಪ ರುದಾರಾಪಾರಹಾರಂಗಳಂ ॥ ೪ ॥

ಈಗ ಸುಮ್ಮನೆ ರಾಜೋಪಚಾರಗಳನ್ನು ಶ್ಲಾಘಿಸಿಕೊಂಡದ್ದರಿಂದ ಪ್ರಯೋಜನವೇನು? ಈ ವನದಲ್ಲಿ ನನ್ನ ಪ್ರಾಣಕಾಂತೆಯನ್ನು ಹುಡುಕುವೆನು. (ಎಂದು ನಡೆದುನೋಡಿ) ಅಯ್ಯೋ! ಪ್ರಿಯೆಯನ್ನು ಹುಡುಕುವದಕ್ಕೆ

ಹೊರಟ ನನಗೆ ಇನ್ನು ವಿರಹತಾಪ ಹೆಚ್ಚುವಹಾಗಾಯಿತು; ಯಾತಕ್ಕೆಂದರೆ,—

ಕಂ|| ತಳೆದೆಳಗೆಂಪಂ ತುದಿಯೊಳ್ |
ಸಲಿಲಮನೊಳಕೊಂಡು ಮೂಡಿದಲರಿಂ ಪೊಸಕಂ ||
ದಳಯಿದುಮುಳಿಸಿಂ ಕಂಬನಿ |
ದಳದೆಳೆಯುಳಲೋಚನಂಗಳಂ ನೆನೆಯಿಸುಗುಂ || ೫ ||

ನನ್ನ ಪ್ರಾಣಕಾಂತೆ ಎಲ್ಲಿಹೋದಳೆಂದು ಹುಡುಕಲಿ?

ಕಂ|| ಅದರಿಂ ನೆಲನಂ ನೋಳ್ಪೆಂ |
ದೊರ್ದಿಕೆ ನೋಸದೊಳಂತು ನಾಂದಮಳಲೆಡೆಯೊಳ್ ಪುಂ ||
ಗಡೆಯುಬ್ಬಿರ್ದತಗ್ಗಿದೆಂ |
ಗಡೆಯ ನಿತಂಬಿನಿಯ ಪಜ್ಜೆ ಕಾಣದೆ ನೋಡಲ್ || ೬ ||

(ಸ್ವಲ್ಪ ನಡೆದು ನೋಡಿ) ಆಹ! ಗುರುತು ಸಿಕ್ಕಿತು ಸಿಕ್ಕಿತು, ಇದರಿಂದ ಆಕೆ ಈಮಾರ್ಗದಲ್ಲೇ ಹೋಗಿರುವಳೆಂದು ಚೆನ್ನಾಗಿ ಗೊತ್ತಾಗುವದು.

ಕಂ|| ಕಡುಮುಳಿಸಿಂ ನಡೆವಾಗಳ್ |
ತೊಡೆಯುತೆ ತುಟಿಗೆಂಪನೊದಿರ್ದ ಕಂಬನಿವೆರಸಿ ||
ಯುಡೆಯೊಳ್ ಕಡೆದಿಕ್ಕಿರ್ಗಗುಪಿ |
ಮೊಡದಿಯ ಕುಚವಸ್ತ್ರ ಮಿದೊ ಶುಕೋದರವರ್ಣಂ || ೭ ||

ಒಳ್ಳೇದು ಇದನ್ನು ತೆಗೆದುಕೊಳ್ಳುವೆನು.

(ಎಂದು ನಡೆದು ಚೆನ್ನಾಗಿನೋಡಿ ಕಂಬನಿದುಂಬಿ)

ಅಯ್ಯೋ! ಇದು ಇಂದ್ರಗೋಪಗಳಿಂದೊಡಗೂಡಿದ ಕೋಮಲವಾದ ಗರಿಕೆ ಬೆಳೆದಿರುವ ಸ್ಥಳವು, ಇದನ್ನು ನೋಡಿ ನಾನು ಭ್ರಾಂತನಾದೆನು. ಈ ನಿರ್ಜನವಾದ ವನದಲ್ಲಿ ನನ್ನ ಪ್ರಿಯೆಯ ವೃತ್ತಾಂತವನ್ನು ನಾನು ಯಾರಮುಖದಿಂದ ತಿಳಿಯಲಿ; ಒಳ್ಳೇದು ಈ ಪರ್ವತದ ದಡದಲ್ಲಿ ಸೋಣೆಯಿಂದುಬ್ಬಿದ ಗೈರಿಕಧಾತು ಮುಚ್ಚಿಕೊಂಡಿರುವ ಕೋಡುಗಲ್ಲಿನಮೇಲೆ ಕುಳಿತುಕೊಂಡು—

ಮತ್ತೊಬ್ಬನ ವ್ಯಸನವನ್ನು ನೋಡಿ ಸಂತೋಷಪಡುತ್ತಿರುವ ಇವನನ್ನು ನಾನು ಕೇಳಬಾರದು (ಎಂದು ಇನ್ನೊಂದುಕಡೆಗೆ ಹೋಗಿ ನೋಡಿ) ಇದೋ ಈ ನೇರಳೇಮರದ ಮೇಲೆ ಬಿಸಿಲಿಲ್ಲದ್ದರಿಂದ ಮದವೇರಿದ ಕೋಗಿಲೆಯು ಕೂತುಕೊಂಡಿರುವದು; ಪಕ್ಷಿಗಳಲ್ಲಿ ಇದು ಪಂಡಿತಜಾತಿ; ಒಳ್ಳೇದು ಇದನ್ನು ಕೇಳುವೆನು.

ಕಂ|| ಎಲೆಮದನದೂತಿ ಕೋಗಿಲೆ |
ಕಲಭಾಷಿಣಿಯೆನ್ನನಿನಿಯಳೊಡನೆನ್ನೊಡನಾ ||
ಒಲವೆಯು ಮೋಹಿಸ್ಸೇರಿಸು ಕಾ |
ದಲಗ್ಗ್ರ ನೀನಲ್ತೆ ಮಾನಭೇದನಮಸ್ತ್ರಂ || ೧೦ ||

(ಆಕಾಶದಲ್ಲಿ ಅದರ ಧ್ವನಿಯನ್ನು ಕೇಳಿ)

ನೀನುಹೇಳುತ್ತೀಯೆ? ಈಪ್ರಕಾರ ಅನುರಕ್ತನಾಗಿರುವ ನಿನ್ನನ್ನು ಬಿಟ್ಟು ಆಕೆ ಹ್ಯಾಗೆ ಹೋದಳೆಂದೊ? ಕೇಳು.

ಕಂ|| ಮುಳಿಸಂ ಪಾಲ್ಗುದಳೆನ್ನೊಳ್ |
ತಿಳಿಯೆಂ ಕಾರಣಮನಾಣಮಿದಳೆನ್ನೊಳಗಾಂ ||
ಎಳಸುವ್ವುದಿಲ್ಲಂ ಭಾವ |
ಸ್ಖಲಿತಮನಿನರೊಳ್ ಪ್ರಭುತ್ವಮುಬಲಾಜನದಾ || ೧೨ ||

(ನೋಡಿ) ಇದೇನು ಬಂದು ಮಾತನ್ನು ಆಡದೆ ಸ್ವಕಾರ್ಯದಲ್ಲಿ ಪ್ರವರ್ತಿಸಿತು.

ಕಂ|| ಪೆರರಳಲಂ ಬಿರಿದಾದೊಡೆ |
ಮರಿವರ್ ತಾಂತಮ್ಮೊನೆ ಮತ್ತ್ರೀದುಃಖಿಯನ ||
ಳ್ಕರಿಸದೆ ನೇರಿಲಸವಿದ |
ಣ್ಗಳಗುಬಿದು ಸವಿವ ಚಂದದಿಂ ಚೆಂದುಟಿಯಂ || ೧೩ ||

ಒಳ್ಳೇದು ಹೋಗಲಿ, ಇದು ನನ್ನ ಪ್ರಾಣಕಾಂತೆಯಂತೆ ಮನೋಹರವಾದ ಕಂಠವುಳ್ಳದ್ದೆಂದು ಇದರಮೇಲೆ ನನಗೆ ಕೋಪವಿಲ್ಲ, ಇದು ಸುಖ

ವಾಗಿರಲಿ. (ಎಂದು ನಡೆದು ಕಿವಿಗೊಟ್ಟು ಕೇಳಿ) ಇದೇನು! ಈ ದಕ್ಷಿಣದಿಕ್ಕಿನಲ್ಲಿ ನನ್ನ ಪ್ರಿಯೆಯ ಕಾಲುಕಡಗದ ಸದ್ದು ಕೇಳಬರುವಂತಿದೆ, ಬಹುಶಃ ಆಕೆ ಅಲ್ಲಿ ಸಂಚಾರಮಾಡುತ್ತಿರಬಹುದು; ಒಳ್ಳೇದು ಅಲ್ಲಿಗೆ ಹೋಗುವೆನು. (ಅತ್ತಲಾಗಿ ಹೋಗಿನೋಡಿ) ಅಯ್ಯೋ!

ಕಂ॥ ಜಳಧರಸಂಕುಳದಿಂ ಕ್ಲ್ಯಾ।
ಮಳಮಪ್ಪಿಕ್ಕೆಸೆಯ ನೋಡಿ ಮಾನಸಸರಕು ॥
ಚ್ಚಳಪಿದಸಂಚೆಯ ಕೋಮಲ।
ಗಳರವಮಿದು ನೋಡೆ ನೂಪುರಾರವಮಲ್ಲಂ ॥ ೧೪ ॥

ಒಳ್ಳೇದು ಇದು ಈ ಸರೋವರವನ್ನು ಬಿಟ್ಟು ಮಾನಸಸರೋವರಕ್ಕೆ ಹೋಗುವದರೊಳಗಾಗಿ ಇದನ್ನು ಕೇಳಿ ನನ್ನ ಪ್ರಿಯೆಯ ವೃತ್ತಾಂತವನ್ನು ತಿಳಿದುಕೊಳ್ಳುವೆನು. (ಎಂದು ಹಂಸವನ್ನು ನೋಡಿ) ಎಲೈ ಜಲಪಕ್ಷಿರಾಜನಾದ

*ಕಂ॥ ಕಲಹಂಸಬಿಸದಬುತ್ತಿಯ।
ನೊಳಬಳಕಂ ಕೊಳ್ವೆಬೆಸಸು ಮುಂಪ್ರಿಯೆಯಿರವಂ ॥
ಬಳಿಕಂ ಪೋ ಮಾನಸಕವರೆ।
ತಿಳಿದರ್ ನಂಬಿದರ ಕಾರ್ಯಮಂ ಕಡೆಗಾಣಿಸರೆ ॥ ೧೫ ॥

ಇದೇನು ಸುಮ್ಮನೆ ಕತ್ತುಬಗ್ಗಿಸಿಕೊಂಡಿರುವದು, ಇದು ಸುಮ್ಮನೆ ಇರುವದನ್ನು ನೋಡಿದರೆ ಮಾನಸಸರೋವರಕ್ಕೆ ಹೋಗುವದಕ್ಕೋಸ್ಕರ ಕಳವಳಪಡುತ್ತಿರುವ ತಾನು ಆಕೆಯನ್ನು ನೋಡಲಿಲ್ಲವೆಂದು ಹೇಳಿದಂತಾಯಿತು. (ಸ್ವಲ್ಪ ಕೋಪದಿಂದ)

---

*ರಾಗ—ಕಲಹಪ್ರಿಯಾ ॥ ॥ತಾಳ ಮಿಶ್ರಛಾಪು॥

ಕಲಹಂಸರಾಜನೆ। ಕಲಹಂಸಗಮನೆ॥ ನೆಲಸಿರ್ಪನೆಲೆಯ ನೀ। ಗಳೆ ಪೇಳಬೇಕು ನೀಂ ॥ ೧ ॥ ನವಬಿಸಭೂಷಿ। ದಿವಿನಿಲ್ಲದಿರು ॥ ಸುದತೀವಿಯುಕ್ತನಾ। ದವನನ್ನು ಪೊರೆಯು ॥ ೨ ॥ ಸ್ವಾರ್ಥಕಿಂತಧಿಕ ಪ। ರಾರ್ಥಸಂಪದಗೆ॥ ಪ್ರಾರ್ಥಿಪನೊರೆಯು ಪ। ದರ್ಥವಾಗಿರಿಗೆ ॥ ೩ ॥

ಕಂ॥ ಎಲೆ ಕಲಹಂಸನೆ ನೀನಾ ।
ಲಲನೆಯ ನೀಸರದ ತೀರದೊಳ್ ಕಾಣದಿರಲ್ ।
ಕಲಿತೆಯದೆಲ್ಲಿಂದಂ ನೀಂ ।
ಚಲನೇ ಬೆಸನೆಂತು ಬೆಡಗುವಡೆದೀ ನಡೆಯಂ । ೧೭ ।

ಕಂ॥ ನಡೆ ತೋರಿಸೆನ್ನ ಕಾಂತೆಯ ।
ನಡೆಯಂ ಕಳ್ದಿರ್ಪ ನೀನೆ ಕಳ್ದಿರ್ಪವಳಂ ।
ಕಂಡುಗವನೆಲ್ಲಮುಮಂ ಪೋ ।
ದೊಡವೆಯು ಕಡಿಯೊಂದದಾವನೊಳ್ ದೊರೆವುದೆಂತಾಂ ॥೧೮॥

ಓಹೋ! ಇವನು ಮಹಾರಾಜನು ಕಾತನು ನನಗೇನಾದರೂ ಶಿಕ್ಷೆಯನ್ನು ಮಾಡಿಯಾನೆಂದು ಭಯದಿಂದ ಹಾರಿಹೋಯಿತು. (ನೋಡಿ) ಇಲ್ಲಿ ತನ್ನ ಪ್ರಿಯೆಯೊಡನೆ ಕುಳಿತಿರುವ ಚಕ್ರವಾಕಪಕ್ಷಿಯನ್ನಾದರೂ ಕೇಳುವೆನು.

ಕಂ॥ ಅನಲ್ತೆ ರಥಿ ರಥಾಂಗಂ ।
ನೀನಲ್ತೆ ರಥಾಂಗಬಾಹುನಸೊಶ್ರೋಣಿ ಕನೆ ।
ಶ್ರೀನಗರದೊಳೆನ್ನನಗಲ್ದಳ್ ।
ತಾನೀಯನು ಬಂಧದಿಂದ ನಿನ್ನಂ ಬೆಳ್ಪಂ ॥ ॥೧೯॥

ಇದೇನು ಸಂಸ್ಕೃತಜ್ಞನಂತೆ ನೀನೆಂದವಾರಂಯಾರು? ಅನ್ನುವದಕ್ಕೆ ಪ್ರತಿಯಾಗಿ ಕಃಕಃ ಎಂದು ನುಡಿಯುವದು. ಇದಕ್ಕೆ ನಾನುಗೊತ್ತಿಲ್ಲವೆ?

ಕಂ॥ ಶ್ರೀಮತ್ಸುವಲಯುಬಂಧು ಪಿ ।
ತಾಮದನಾವಂಗೆ ಮೊಕ್ಕ್ಯಯೋಜನಪಂ ವಾ ।
ತಾಮದ ನೊಪ್ಪಿಯಿಂದಂ ।
ಭೂವಮಾನಿನಿಮಿಂ ಸ್ವಯಂವೃತಂ ಪತಿಯವನೆಂ । ೨೦ ।

ಇದೇನು ಸುಮ್ಮನೆ ಕೂತಿರುವದು! ಇರಲಿ, ಇದನ್ನು ಆಕ್ಷೇಪಿಸಿ ನಿಂದಿಸುವೆನು.

ಕಂ॥ ವನರುಹದಳದೊಳ್ ಮರೆಗೊಂ ।

ಡಿನಿದಳ್ ಬಹುದೂರಮಿರ್ಪ್ಪವೋಲಿರೆದೊಳ್ದ್ವಯ ॥

ಎನಗಂ ವಿರಹವ್ಯಥೆಯಿಂ ।

ತೆನುತವಿರಿಯೆಯು ಪೇಳದಿರ್ಪ್ಪ ಯೋ ಪ್ರಿಯೆಯಿರವಂ ॥ ೨೧ ॥

ನೀನು ಯಾವದನ್ನೂ ಹೇಳದೆ ಹೀಗೆ ಸುಮ್ಮನಿರುವದು ನನ್ನ ದುರದೃಷ್ಟದ ಪ್ರಭಾವ; ಒಳ್ಳೇದು ಮತ್ತೊಂದುಕಡೆ ಹೋಗಿ ನೋಡುವೆನು (ಒಂದು ಹೆಜ್ಜೆ ಹೋಗಿ) ಈ ಪ್ರದೇಶವನ್ನು ಬಿಟ್ಟು ನಾನು ಹ್ಯಾಗೆ ಹೋಗಲಿ.

ಕಂ॥ ಬಳಗೊಂಡುಜಿ ನುಂಗುತ್ತಿ ।

ರ್ಪ್ಪಗಳಿಯುಂ ಕಮಳಮಿದು ಕಳ್ಳ್ಗಳಾ ಚೆಂದುಟಿಯುಂ ॥

ಕಳಸೀತ್ಕಾರಾಂಚಿತ ಮು ।

ಖ್ಖಳಿಯುಳ ಮೊಗದಂತೆ ನೋಡಲೆನ್ನಂ ತಡೆಗುಂ ॥ ೨೨ ॥

ಬುದ್ಧಿಗೆಟ್ಟು ಪ್ರಿಯೆಯ ಮುಖದರ್ಶನವನ್ನು ತೊರೆದುಕೊಂಡು ಬೇಡಾಡುತ್ತಿರುವ ನಾನು ಇಂಥಾ ಕಮಲವನ್ನು ಬಿಡದೆ ಸೇವಿಸುತ್ತಿರುವ ಈ ದುಂಬಿಯನ್ನೇ ಬಹುಮಾನಿಸುವೆನು.

ಕಂ॥ ತಿಳಿಪೆನಗಿನಿಯಳಂದಂತವ ।

ನೆಳಯೋ ವೇಣ್ಕುಂಡುದಿಲ್ಲ ನೀನಾಕಳಿಯನಾ ॥

ಯೆಳೆಯಳನುದ್ವರಗಂಪಂ ।

ಬಳಸಿರ್ದ್ದೊಡೆ ಬಿಡಿಸುತಿರ್ದ್ದಯೋಂ ತಾವರೆಯಂ ॥ ೨೩ ॥

ಇನ್ನೊಂದುಕಡೆ ಹೋಗುವೆನು. (ಎಂದು ನಡೆದು ನೋಡಿ) ಅದೋ ಆಕಡೆ ಒಂದು ಆನೆಯು ನೀಪವೃಕ್ಷದಮೇಲೆ ಸೊಂಡಿಲಿಟ್ಟುಕೊಂಡು ಹೆಣ್ಣಾನೆಯ ಜೊತೆಯಲ್ಲಿ ನಿಂತಿರುವದು. ಒಳ್ಳೇದು ಅಲ್ಲಿಗೆ ಹೋಗಿ ಇದನ್ನು ಕೇಳುವೆನು. (ಒಂದು ಹೆಜ್ಜೆ ನಡೆದು) ಓಹೋ! ಈಗ ಜಾಗ್ರತೆಯಾಗಿ ಹತ್ತರಕ್ಕೆ ಹೋಗಬಾರದು,

ಕಡುರಾಗಂಬಡೆದಿರ್ಪೆನೂರ್ವಶಿಯೊಳಾಂನೀನಂತುಕೂರ್ತಿರ್ಪೆಯಾ ।
ಪಿಡಿಯಲ್ಲಾಂಸಮರಾದೊಡಂಗಜಪನೇಂಪ್ರೋದ್ಯದ್ಗರ್ಭಿಯೊಳ್ಗಾರ್ತಿಯಂ ॥

ಇನ್ನು ಇಲ್ಲಿಂದ ಮುಂದಕ್ಕೆ ಹೋಗುವೆನು. (ಎಂದು ನಡೆದು ಪಾರ್ಶ್ವದಲ್ಲಿ ನೋಡಿ) ಆಹ! ಸುರಭಿಕಂದರವೆಂಬ ಈ ಪರ್ವತವು ವಿಶೇಷವಾಗಿ ಮನೋಹರವಾದದ್ದು; ಇದರ ತಪ್ಪಲಲ್ಲೇನಾದರೂ ನನ್ನ ಪ್ರಿಯೆ ದೊರೆತಾಳೆ? (ಎಂದು ನಡೆದು ಪಾರ್ಶ್ವದಲ್ಲಿ ನೋಡಿ) ಅಯ್ಯೋ! ನಾನು ಮಿಂಚಿನಿಂದೊಡಗೂಡಿದ ಮೇಘವನ್ನು ನೋಡುತ್ತ ಆ ಪ್ರಿಯಳು ಸಮೀಪದಲ್ಲಿದ್ದಾಗಿನ ಸ್ಥಿತಿಯನ್ನು ಭಾವಿಸಿಕೊಂಡಾದರೂ ಸ್ವಲ್ಪ ದುಃಖಶಾಂತಿಯನ್ನು ಹೊಂದಿದ್ದೆ; ಈಗ ನನ್ನ ದುರದೃಷ್ಟದಿಂದ ಆ ಮೇಘವೂ ಮಿಂಚನ್ನಗಲಿ ಹೋಯಿತು; ನಾನು ಇಷ್ಟು ಮಂದಭಾಗ್ಯನಾದರೂ ನಿರಾಶನಾಗದೇ ಇರುವೆನು; ಆದ್ದರಿಂದ ಈ ಪರ್ವತವನ್ನು ಕೇಳದೆ ಸುಮ್ಮನೆ ಹಿಂತಿರುಗಲಾರೆ.

ಕಂ॥ ರತಿಗೆಣೆ ಸೂಕ್ಷ್ಮ್ರಭುಜಾಂತರೆ ।
ನಿತಂಬವತಿ ಪೃಥುನಿತಂಬ ಪರ್ವಸ್ಥಳಸಂ ॥
ನತೆ ಪರ್ವತೇಂದ್ರ ಮತ್ಪ್ರಿಯೆ ॥
ಲತಾಂಗಿ ತಾಂ ನಿನ್ನ ತಪ್ಪಲೊಳಗಿರ್ದ್ದಪಳೇಂ ॥ ೨೭ ॥

ಇದೇನು ಸುಮ್ಮನಿರುವದು; ದೂರದಲ್ಲಿರುವದರಿಂದ ನನ್ನ ಮಾತು ಕೇಳಿಸಲಿಲ್ಲವೇನೊ, ಇಳಿದು ಸಮೀಪಕ್ಕೆ ಹೋಗಿ ಕೇಳುವೆನು.
(ಸಮೀಪಕ್ಕೆ ಹೋಗಿ)—

ಕಂ॥ ಎನ್ನಿಂ ವಿಯುಕ್ತೆ ಭಾಮಿನಿ ।
ನಿನ್ನಿಂ ಸರ್ವಾಂಗಸೌಂದರೀಶಾಲಿನಿ ಸ ॥
ರ್ವೋನ್ನತ ಸಕಲಧರಿತ್ರೀ ।
ಭೃನ್ನಾಯಕ ದೃಷ್ಟೆ ರಮ್ಯವೆನಿಪೀ ವನದೊಳ್ ॥ ೨೮ ॥

(ಕಿವಿಗೊಟ್ಟು ಪ್ರತಿಶಬ್ದವನ್ನು ಕೇಳಿ ಸಂತೋಷದಿಂದ) ಯಥಾಕ್ರಮವಾಗಿ ದೃಷ್ಟೆಯೆಂದು ಹೇಳಿತು. ಎಲೈ ಪರ್ವತಶ್ರೇಷ್ಠನೆ ಹಾಗಾದರೆ ಎಲ್ಲಿ ನನ್ನ ಪ್ರಿಯೆ? (ಎಲ್ಲಾ ಕಡೆಯಲ್ಲೂ ನೋಡಿ) ಅಯ್ಯೋ! ಇದು ಈ ಪರ್ವ

ತದ ಗುಹೆಯಲ್ಲಿ ಹುಟ್ಟಿದ ನನ್ನ ಧ್ವನಿಯು ಪ್ರತಿಧ್ವನಿಯೇ ಹೊರತು ಬೇರೆಯಿಲ್ಲ. (ಎಂದು ಮೂರ್ಛಾಪನ್ನ ಹಾಗೆ ಸಂತಾಪಪಟ್ಟುಕೊಂಡು ಎದ್ದು ನಿಟ್ಟುಸುರು ಬಿಟ್ಟು) ನಾನು ಬಹಳವಾಗಿ ಬಳಲಿದೆ ಈ ಗಿರಿನದೀತೀರಕ್ಕಾದರೂ ಹೋಗಿ ತರಂಗಗಳ ಮೇಲಿಂದ ಬರುವ ತಂಗಾಳಿಯನ್ನು ಸೇವಿಸುವೆನು. (ನಡೆದು ನೋಡಿ) ಹೊಸನೀರು ಬಂದು ಕದಡಿರುವ ಈ ನದಿಯನ್ನು ನೋಡಿ ನನ್ನ ಮನಸ್ಸಿಗೆ ಬಹಳ ಸಂತೋಷವುಂಟಾಗುತ್ತಿರುವದು ಯಾತಕ್ಕೆಂದರೆ—

ವೃತ್ತ। ಕುಟಿಲಿಸೆ ತರಂಗವೆಂಬ ಕುಡಿಹುಬ್ಬುಗಳಿಳ್ಕಿದ ಜಕ್ಕವಕ್ಕಿ ಗೊಂ।
ದಣಿ ಮಣಿಕಾಂಚಿಯಂತೆಸೆಯೆ ಸಂಭ್ರಮದಿಂದ ಸಡಿಲ್ದ ಸೀರೆಯಂ।
ತೆಣಿಯುರವಿಪ್ಪಗಳೊಳ್ನೊರೆಯುಕಯ್ಯೊಳಾಂತೆಯ್ದೆ ತೊಳಂಕಿನಿಂದೆ ತಾ।
ಕ್ಷೋಭಿಸಿ ಕನಲ್ದು ಕಾಂತೆ ಪರಿಣಾಮಿಸಿದಳ್ ತೊರೆಯಾಗಿ ಭಾವಿಸಲ್ ೧೯।

ಒಳ್ಳೇದು ಇವಳ ಮುನಿಸನ್ನು ತಿಳಿಸುವೆನು.

ಕಂ॥ ನುಡಿದಪೆನಾಂ ಸವಿವಾತಂ।
ಕಡುಕೂರ್ಮೆಯ ನಿನ್ನೊಳಾಂತಮೊ ನಡೆದಪೆನಾಂ।
ಸಡಿಲದವೋಲ್ ಲೋಲವೆನ್ನಂ।
ಬಿಡಲೆನ್ನೊಳಗಾವ ತಪ್ಪನೆಣಿಸುವೆ ನೀಂ ಪೇಳ್ ॥ ೨೦ ॥

ಇದೇನು! ಸುಮ್ಮನಿರುವಳು, (ನೋಡಿ) ಓಹೋ! ಇದು ನಿಜವಾದ ನದಿಯಂತೆ ತೋರುತ್ತೆ; ಊರ್ವಶಿಯು ಈರೂಪವಾಗಿದ್ದ ಪಕ್ಷದಲ್ಲಿ ಪುರೂರವನನ್ನು ಬಿಟ್ಟು ಸಮುದ್ರನ ಕಡೆಗೆ ಹೋಗುತ್ತಿರಲಿಲ್ಲ; ಆಗಲಿ ಚಿಂತೆಯಿಲ್ಲ, ಬಹಳವಾಗಿ ಬೇಸರಗೊಂಡವರಿಗೆ ಶ್ರೇಯಸ್ಸಾಗಲಾರದು; ಆದ್ದರಿಂದ ನನ್ನ ಪ್ರಾಣಕಾಂತೆಯು ಎಲ್ಲಿ ನನ್ನ ಕಣ್ಣಿಗೆ ಮರೆಯಾಗಿ ಹೋದಳೊ, ಪುನಃ ಅದೇ ಸ್ಥಳಕ್ಕೆ ಹೋಗುವೆನು. (ನಡೆದು ನೋಡಿ) ಓಹೋ! ಅಲ್ಲಿಗೆ ಹೋಗುವ ಮಾರ್ಗದ ಗುರುತು ಸಿಕ್ಕಿತು.

ಕಂ॥ ಅಕಟಂಗಜಪದ ಮರೆಸಿದು ।

ದಾಕ್ಷೀಂದುಸಿಖಾಸ್ವೆಯಾವೃದರಸುಮಮಂ ಪ ॥

ಷ್ಟಾಕಾಳಿಕೆ ಸೊಚಕವಂ ।

ಸಾಕಾಂಕ್ಷಂ ಮುಡಿದಳಂದಿತ ನವಕೇಸರಮಂ ॥ ೩೧ ॥

ಒಳ್ಳೇದು, ಇಲ್ಲಿ ಸುಖವಾಗಿ ಮಲಗಿರುವ ಜಿಂಕೆಯನ್ನು ಕೇಳಿ ನನ್ನ ಪ್ರಿಯೆಯ ವೃತ್ತಾಂತವನ್ನು ತಿಳಿಯುವೆನು. ಇದೇನು! ನನ್ನನ್ನು ಲಕ್ಷ್ಯಮಾಡದೆ ಆಕಡೆಗೆ ನೋಡುತ್ತಿರುವದು.

ಕಂ॥ ಅದೆತಡೆದ್ರುಮಗಣಿಗಂ ಪೋಲ್ ।

ಗಂಡುಮೆಳವರಿಯೊಂದುಗೊಡಿಕೊಂಡೊಯ್ಯನೆ ತ ॥

ನ್ನೆಡೆಗೆ ನಡೆತಪ್ಪ ಹುಲ್ಲಯು ।

ಕಡುನೇಹದೆ ಬಿಟ್ಟಿಸುವುದು ಕೊಂಕಿಸಿ ಕೊರಲಂ ॥ ೩೨ ॥

ಆಹ!

ಕಂ॥ ವನಶೋಭೆಯ ನೀಕ್ಷಿಸಲೀ ।

ಬನಸಿರಿಯಿರಿಸಿದ ಕಟಾಕ್ಷಮೊಂದೆಂಬ ವಿಭ್ರಾ ॥

ವನೆಯಿಾವ ಕೃಷ್ಣಸಾರದ ।

ತನುರುಚಿ ಸಂತಾನಮೀಂ ವಿರಾಜಿಸಿದಪುದೋ ॥ ೩೩ ॥

ಒಳ್ಳೇದು ಇದನ್ನು ಕೇಳುವೆನು. (ಎಂದು ಕೈಮುಗಿದುಕೊಂಡು)

*ಕಂ॥ ಹರಿಣನೆ ಕಂಡೆಯ ಪೇಳ್ ।

ನ್ನರಸಿಯ ನಾಕಗಿದು ಕುರುಪು ಕೇಳಾವುತಸುಂ ॥

ದರಲೋಚನೆ ನಿನ್ನಯ ಸಹ ।

ಚರಿಯುವ್ರೋಲವಳಂ ಮನೋಜ್ಞಮೆನಲೀಕ್ಷಿಪಳ್ ॥ ೩೪ ॥

---

*ರಾಗ—ಕಾಂಭೋಜಿ॥ ॥ಆದಿತಾಳ॥

ಕೃಷ್ಣಸಾರನೆ ನೀಂ । ಕಂಡೆಯಾ ಪ್ರಿಯೆಯಾ ॥ ಕೃಷ್ಣವೇಣಿಯಾದ ಕಾಮಿನೀ ಮಣಿಯಾ ॥ ೧ ॥ ವಯುದೊಳು ಪೇಳ್ । ನ್ನಯ ಕಾಂತೆ ನಿನ್ನ । ಪ್ರಿಯೆಪೋಲ್ವಿಕಾಲಾ । ಕ್ಷಿಯು ಸುಂದರಾಂಗಿ ॥ ೨ ॥ ಕಾರುಣಿಂತಿದಾ ಕಾ । ಹರ ಕಾತರಾಕ್ಷಿ ॥ ಹರಿಣಾಂಗನೆ ಯಂ । ತಿದೆ ನೋಡುತಿರ್ದಳ್ ॥ ೩ ॥

ಇದೇನು ನನ್ನ ಮಾತನ್ನು ಲಕ್ಷ್ಯಮಾಡದೆ ತನ್ನ ಪ್ರಿಯೆಯಕಡೆಗೆ ತಿರುಗಿಕೊಂಡಿತು ; ದುರದೃಷ್ಟವೆಂಬುವದು ಸರ್ವಪ್ರಕಾರದಿಂದಲೂ ಹೀಗೆಲ್ಲಾ ಅವಮಾನಪಡುವದಕ್ಕೆ ಕಾರಣವಾದದ್ದು ; ಇಲ್ಲಿಂದ ಇತ್ತ ಹೋಗುವೆನು. (ಎಂದು ನಡೆದು ನೋಡಿ) ಈ ಕಲ್ಲಿನ ಸಂದಿಯಲ್ಲಿ ಕಾಣುವದೇನು ?

ವೃತ್ತ॥ ಪುದಿದಪುದಿಂತಿದಂ ತೊಳಗ್ವ್ಪುಸಿಂಹಹತದ್ವಿಪಮಾಂಸಖಂಡಮು ।
ಲ್ದಿದೆ ಸರಿಯಿಂದೆನಾಂದುದು ವನಸ್ಥಳಿಗಂಗಿರಿಯಲ್ತು ನೋಡೆ ತಾ॥
ನಿದಸುಗೆಗೊಂಡಲಂತೆ ಕಿಸುವಣ್ಣದೆ ರಂಜಿಪ ರನ್ನವೋವೋಬಂ ।
ಗದಿರನಿದಂನಿಮಿಲ್ಲ್ದಕರಾಗ್ರದೆಕೊಂಡಪನಂತೆತೋರುಗುಂ॥೩೫॥

ಇದು ನನ್ನ ಮನಸ್ಸನ್ನು ಅಪಹರಿಸುವದು, ಇದನ್ನು ತೆಗದುಕೊಳ್ಳುವೆನು. ಅಥವಾ ಯಾತಕ್ಕೆ ತೆಗದುಕೊಳ್ಳಲಿ—

ಕಂ॥ ಈ ರತ್ನಂ ಸುರತರುಸುಮ ।
ಸೌರಭದಿಂ ತೀವಿದವಳ ಮುಡಿಗಿದೆಯೋಗ್ಯಂ ॥
ಆ ರಮಣಿ ಯಗಲ್ದಿರೆ ಕ ।
ಣ್ಣೀರಿಂದಿದನೇತಕಾಂ ನಿವರ್ಣಂ ಗೆಯ್ವೆಂ ॥ ೩೬ ॥

ತೆರೆಯಲ್ಲಿ.— ತೆಗೆದುಕೊ ತೆಗೆದುಕೊ—

ಕಂ॥ ಶ್ರೀಗಿರಿಜಾಚರಣಾಂಬುಜ ।
ರಾಗದಿ ನಿದು ಸಂಭವಿಸಿದ ಸಂಗಮಣೀಯು ॥
ಬ್ಯಾಗತಮೊಳಿ ಯಿದನಾಂತವ ।
ನೇಗಂ ಪಡೆಗುಂ ನಿಜೇಷ್ಟಜನಸಂಗಮಮಂ ॥ ೩೭ ॥

ರಾಜಂ.—(ಕಿವಿಗೊಟ್ಟು ಕೇಳಿ) ಇದ್ಯಾರು ! ಹೀಗೆ ನನ್ನಲ್ಲಿ ಕರುಣವಿಟ್ಟು ಹೇಳುವರು ; (ಸ್ವಲ್ಪ ಯೋಚಿಸಿ) ಆಹ ! ಆ ಗಜಚರ್ಮಧಾರಿಯಾದ ಭಗವಂತನೇ ನನ್ನನ್ನು ಕರುಣಿಸುವನು ; ಎಲೈ ಪೂಜ್ಯನಾದ ಮಹೇಶ್ವರನೆ ನಾನು ಅನುಗ್ರಹೀತನಾದೆನು. (ಎಂದು ಮಣಿಯನ್ನು ತೆಗೆದುಕೊಂಡು) ಎಲೆ ಸಂಗಮನೀಯವೆ.

ಕಂ॥ ಅತನು ಮನ್ನ್ಯೆಯು ಪಿರಿದದಿ ।
ಸೀತರನಳಲ್ಪಿನ್ನ ನಾಕೆಯೊಡವೆರೆಸಿದೊಡಾಂ ॥
ಪ್ರೀತಿಯಿನಾಂಪೆಂ ನಿನ್ನಂ ।
ಭೂತೇಶಂ ಪೆರೆಯನಾಂತತೆರದಿಂ ತಲೆಯೊಳ್ ॥ ೩೮ ॥

(ಎಂದು ಸ್ವಲ್ಪ ನಡೆದು ನೋಡಿ) ಇದೇನು ಈ ಲತೆಯು ಹೂವನ್ನು ಬಿಡದೇ ಇದ್ದಾಗ್ಯೂ ನನ್ನ ಮನಸ್ಸಿಗೇನೋ ಪ್ರೀತಿಯನ್ನುಂಟುಮಾಡುತ್ತಿರುವದು ; ಅಥವಾ ಮನೋಹರವಾಗಿರುವದರಿಂದ ಇದು ನನ್ನನ್ನು ಪ್ರೀತಿಪಡಿಸುವದು ಯುಕ್ತ ; (ನೋಡಿ) ಆಹ! ಈ ಲತೆಯು—

ವೃ॥ ಮಳೆಯಿಂದಂ ತೊಂದಳಿರ್ಗಾಂ ದಿರೆನಯನಜಲಾಪಾತಧೌತೋಷ್ಠವೆಂಬಂ ।
ತಳಿರಾಪಾಭಾವದಿಂ ಚಿಂತಿಸುತ ಮುಸಿಕನಿರ್ಪಂತೆ ಚೈತ್ರಂ ಬಿಡಲ್ ಪೂ ॥
ಗಳಬೇಡಳ್ಗಿರ್ಪನಂ ಪಚ್ಚ ಮನಳಿದಪ್ಪೋಲಿರ್ಪಂ ತತೋರುತ್ತವೆನ್ನಂ ।
ಮುಳಿಸಿಂ ಕಂಬಿಟ್ಟೊದಂ ಲಕ್ಷ್ಮಿಸದನುಶಯವಾಂತೋರ್ವಳಂ ಪೋಲುತಿರ್ಕ್ಕುಂ

ನನ್ನ ಪ್ರಾಣಕಾಂತೆಯನ್ನು ಹೋಲುತ್ತಿರುವ ಇದನ್ನಾದರೂ ಆಲಿಂಗಿಸಿಕೊಂಡು ಮನಸ್ಸನ್ನು ಸ್ವಲ್ಪ ಸಮಾಧಾನಪಡಿಸುವೆನು. (ಆಲಿಂಗಿಸುವನು)

(ಲತಾಸ್ಥಾನದಲ್ಲಿ ಊರ್ವಶಿಯು ಪ್ರವೇಶಿಸುವಳು.)

ರಾಜ.—(ಕಣ್ಮುಚ್ಚಿಕೊಂಡಿದ್ದ ಹಾಗೇ ಸ್ಪರ್ಶಿಸುವವನ್ನು ನಟಿಸಿ) ಇದೇನು! ನನ್ನ ಶರೀರವು ಊರ್ವಶಿಯ ಮೈಸೋಂಕಿದಂತೆ ಸುಖಪಡುವದು ; ನನಗಂತೂ ಈ ವಿಷಯದಲ್ಲಿ ನಂಬಿಕೆಯಿಲ್ಲ. ಯಾತಕ್ಕೆಂದರೆ,

ಕಂ॥ ಮೊದಲಿನಿಯಳೆಂದು ಭಾವಿಸಿ ।
ಮದು ಪೆರತೊಂದಾದುದೊಡನೆ ತಾನದರಿನಲ ॥
ಚ್ಛಗದೆ ಭೋಂಕನೆ ಕಂಡಂ ನ್ತೆ ।
ರ್ಗದೆ ಭಾವಿಸುತಂ ಲತಾಂಗಿಯಂ ಸುಖಿಸುವೆ ನಾಂ ॥ ೪೦ ॥

(ಮೆಲ್ಲಮೆಲ್ಲಗೆ ಕಣ್ಣನ್ನು ಬಿಟ್ಟು ನೋಡಿ) ಇದೇನು! ನಿಜವಾಗಿ ನನ್ನ ಕಾಂತೆ!

ಊರ್ವ.—(ಆನಂದಬಾಷ್ಪವನ್ನು ಬಿಟ್ಟು) ಮಹಾರಾಜನಿಗೆ ಜಯವಾಗಲಿ.

ರಾಜಂ.—*ಕಂ॥ ಚಿರಕೋಪಶೀಲೆ ನಿನ್ನಯ ।
ವಿರಹದೆ ಜನಿಯಿಸಿದ ಮೋಹದೊಳ್ ಮುಳುಗಿರ್ದಾಂ ॥
ಅರಸಿಯುಮೇರ್ದಾನಿನ್ನಂ ।
ಪರಮಂದೊರೆದಾತನಾಂತ ಪ್ರೋಲ್ಲಾಸನೆಯಂ ॥ ೪೧ ॥

ಊರ್ವ.—ಮಹಾರಾಜನೆ ಸ್ಥಾವರರೂಪವನ್ನು ಹೊಂದಿದ್ದ ನನಗೆ ಬಹಿರಿಂದ್ರಿಯ ವ್ಯಾಪಾರವಿಲ್ಲದ್ದರಿಂದ ಅಂತರಿಂದ್ರಿಯ ವ್ಯಾಪಾರದಿಂದಲೇ ನಿನ್ನ ವೃತ್ತಾಂತವನ್ನೆಲ್ಲಾ ಚೆನ್ನಾಗಿ ತಿಳಿದೆನು.

ರಾಜಂ.—ನಿನಗೆ ಸ್ಥಾವರರೂಪ ಬಂದದ್ದು ಹ್ಯಾಗೆ?

ಊರ್ವ.—ಮಹಾರಾಜನೆ ಅದನ್ನು ಹೇಳುತ್ತೇನೆ; ಆದರೆ ಕೋಪದಿಂದ ನಾನು ನಿನ್ನನ್ನಗಲಿ ನಿನಗೆ ಇಷ್ಟು ದುಃಖವನ್ನುಂಟುಮಾಡಿದ್ದರಿಂದ ನಿನ್ನ ಕೋಪಕ್ಕೆ ಪಾತ್ರಳಾಗುವದಕ್ಕೆ ಅರ್ಹಳಾಗಿದೇನೆ; ಆದ್ದರಿಂದ ನೀನು ಪ್ರಸನ್ನನಾಗಬೇಕೆಂದು ಬೇಡುವೆನು.

ರಾಜಂ.—ನೀನೇನೂ ನನ್ನನ್ನು ಪ್ರಸನ್ನನನ್ನು ಮಾಡಬೇಡ; ನಿನ್ನನ್ನು ಕಂಡಮಾತ್ರದಿಂದಲೇ ನಾನು ಒಳಗೂ ಹೊರಗೂ ಸಹ ಪ್ರಸನ್ನನಾಗಿಯೇ ಇರುವೆನು. ನೀನು ಇದುವರಿಗೂ ನನ್ನನ್ನು ಬಿಟ್ಟಿದ್ದದ್ದು ಹ್ಯಾಗೆ? ಹೇಳು.

ಊ.—ಮಹಾರಾಜನೆ ಕೇಳು, ಪೂರ್ವದಲ್ಲಿ ಪೂಜ್ಯನಾದ ಷಣ್ಮುಖನು ಶಾಶ್ವತವಾದ ಕುಮಾರವ್ರತವನ್ನು ಪರಿಗ್ರಹಿಸಿ ಈ ಗಂಧಮಾದನ ಪರ್ವತದ ಅಕಲುಷವೆಂಬ ಜಲಪ್ರಾಯವಾದ ಪ್ರದೇಶದಲ್ಲಿ ವಾಸಮಾಡುತ್ತಿದ್ದನು;

---

*ರಾಗ—ಜಂಜೋಟಿ॥ ॥ಏಕತಾಳ॥

ಇಂತುಸಂತೋಷವಾಂತೆನು ಕಾಂತೆ ॥ ಪ ॥ ಚಿರಕಟುಕೋ ನಿನ್ನ ॥ ವಿರಹದಿ ಜನಿಸಿದ ॥ ನಿರವಧಿಮೋಹದೊಳಿರ್ದಾ । ಇಂತು ॥ ೧ ॥ ಹರಣದ ನೆರೆದವಂ । ನೆರವನ್ನೊಲಿದವನು ॥ ತರುಣಿಯು ನಿನ್ನನು ಸೇರಿದಾ । ಇಂತು ॥ ೨ ॥ ಸುತನುವೆನ್ನಂ ಲತಾ । ಕೃತಿಯೊಳಗಿರು ನೀಂ ॥ ಕೃತಿಯನಾಂ ನಿನ್ನನು ಸೇರಿದಾ । ಇಂತು ॥ ೩ ॥

ಆಗ ಯಾವಸ್ತ್ರೀಯು ಈ ವನವನ್ನು ಪ್ರವೇಶಿಸುವಳೋ ಅವಳು ಲತಾರೂಪವನ್ನು ಹೊಂದಲಿ ಎಂತಲೂ ಈ ಲತಾರೂಪವು ಪಾರ್ವತಿಯ ಚರಣರಾಗದಿಂದುಂಟಾದ ರತ್ನದ ಸಂಬಂಧವಿಲ್ಲದೆ ಕಳೆಯುವದಿಲ್ಲವೆಂತಲೂ ಕಟ್ಟನ್ನು ಮಾಡಿದ್ದನು; ಗುರುಶಾಪದಿಂದ ಮೂಢಳಾದ ನಾನು ಈ ಸಂಗತಿಯನ್ನು ತಿಳಿಯದೆ ನಿನ್ನ ಅನುನಯವನ್ನೂ ಕೇಳದೆ ಈ ವನಕ್ಕೆ ಪ್ರವೇಶಮಾಡಿದ ಮಾತ್ರಕ್ಕೆ ಒಂದು ವಾಸಂತೀ ಲತೆಯಾದೆನು.

ರಾ.—ನೀನು ಹೇಳಿದ್ದೆಲ್ಲಾ ಸಂಗತವಾಗಿದೆ ಆದರೆ,

ಕಂ॥ ಅಲಸಿದರತಿಯಿಂದೆಪೋಸೊಳ್ ।
ಮಲಂಗಿರೆನ್ನಂ ಪ್ರವಾಸಿಯೆಂತೆಣಿಸುವನೀಂ ॥
ಪಲವುಯುಗಗಳಿರುಳುವೆಂತು ।
ತ್ವಲಾಕ್ಷಿ ಮಚ್ಚಿರವಿಯೋಗವಂ ಸಹಿಸಿದೆಪೇಳ್ ॥ ೪೧ ॥

ಇದೊ ನೋಡು ನಿನ್ನ ಸಮಾಗಮಕ್ಕೆ ಕಾರಣವಾದ ಆ ರತ್ನವು ನನಗೆ ಸಿಕ್ಕಿರುವದು; ಇದರ ಮಹಿಮೆಯಿಂದಲೇ ನಾನು ನಿನ್ನನ್ನು ಸೇರಿದ್ದು.

(ಎಂದು ರತ್ನವನ್ನು ತೋರಿಸುವನು.)

ಊ.—(ನೋಡಿ) ಓಹೋ! ಇದು ಸಂಗಮನೀಯ ರತ್ನವೆ? ಇದರಿಂದಲೇ ಮಹಾರಾಜನಾದ ನೀನು ಲತಾರೂಪಳಾದ ನನ್ನನ್ನು ಆಲಿಂಗಿಸಿಕೊಂಡಮಾತ್ರಕ್ಕೆ ನಾನು ನಿಜರೂಪವನ್ನು ಹೊಂದಿದೆನು.

(ಎಂದು ಆ ರತ್ನವನ್ನು ಹಣೆಯಮೇಲಿಟ್ಟುಕೊಂಡು ವಂದಿಸುವಳು.)

ರಾಜ.—ಎಲೆ ಸುಂದರಿ ಹಾಗೇ ಕ್ಷಣಕಾಲ ನಿಂತುಕೊಂಡಿರು.

ಕಂ॥ ಥಳಥಳಿಸುವ ರತ್ನದ ಕಂ ।
ಬೆಳಗುಗಳಿಂದಳರ್ದ ನಿನ್ನ ನಗೆಮೊಗವಿದು ತ ॥
ಳ್ತಳವಿಸಿಲಿಂತುರಗಿದ ನವ ।
ನಳಿನದ ಪೊಸಬೆಡಗನಾಂತದೇಂ ಮೆರೆದಪುದೋ ॥ ೪೨ ॥

ಊರ್ವ.—ಮಹಾರಾಜನೆ ನೀನು ರಾಜಧಾನಿಯನ್ನು ಬಿಟ್ಟುಬಂದು ಬಹಳ ದಿವಸಗಳಾಗಲಿಲ್ಲವೆ? ಇನ್ನೂ ನಾವು ಇಲ್ಲೇ ಇದ್ದರೆ ಪ್ರಜೆಗಳೆಲ್ಲರೂ

ನನ್ನ ಮೇಲೆ ದೂಱಪಡುವರು ; ಆದ್ದರಿಂದ ನಾವಿನ್ನು ಇಲ್ಲಿಂದ ಹೊರ ಡೋಣ.

ರಾಜಂ.—ದೇವಿ ನಿನ್ನಾಜ್ಞೆಯಾದಂತೆಯೇ ಆಗಲಿ.

ಉರ್ವ.—ಮಹಾರಾಜನೆ ಯಾವ ರೀತಿಯಿಂದ ಹೊರಡಲಿಚ್ಛೈಸುವೆ ?

ರಾಜಂ.—

*ಕಂ॥ ಸುರಚಾಪಂ ಚಿತ್ರದವೋಲ್ ।
ಹಿರಿ ಪಳವಿಗೆದಱಗೆ ಮಿಂಚು ನಡೆಮಾದವೋಲ್ ॥
ಚರಿಸುವ ಪೊಸಮುಗಿಲಿಂದೆ ।
ನ್ನರಮಣಿಗೆ ವಿಲಾಸಗಮನೆ ಸಾಧ್ಯಂಗಾವುದಿನ್ನುಂ ॥ ೪೮ ॥

(ಎಂದಿಬ್ಬರೂ ತೆರಳುವರು.)

---

*ರಾಗ—ಸುರಟಿ ॥ ರೂಪಕತಾಳ ॥

ಮುಗಿಲೆನಿಪ್ಪ ತೇರಿನಿಂದ । ನಗರಕಿನ್ನು ॥ ಗಗನಮಾರ್ಗದಲ್ಲಿ ಬೇಗ । ಮಗುಳ್ದೆ ಕೆಳಚು ನೀಂ ॥ ೧ ॥ ಕಾಂತೆ ಮಿಂಚುತಿಹ ಪತಾಕೆ । ಯಂತೆ ಶೋಭಿಸೆ ॥ ಅಂತರಿಕ್ಷದೊಳು ವಿಮಾನ । ದಂತೆ ಚರಿಸುವ ॥ ೨ ॥ ಚಿರದಚಿತ್ರದಂತೆ ಮೆರೆಯೆ । ಸುರಚಾಪವು ॥ ಹಿರಿದುವೇಗದಿಂದ ಮನವ । ಹರುಸಗೊಳಿಸುವ ॥ ೩ ॥

ಚತುರ್ಥಾಂಕವು ಮುಗಿದುದು.



# ಪಂಚಮಾಂಕಂ.

(ಅನಂತರ ವಿದೂಷಕನು ಪ್ರವೇಶಿಸಿ ಸಂತೋಷದಿಂದ)

ವಿದೂ.—*ಭ್ರಾತೃ! ಭ್ರಾತೃ! ನಮ್ಮ ಮಹಾರಾಜನು ಊರ್ವಶೀಸಹಿತನಾಗಿ ನಂದನವನ ಮೊದಲಾದ ದೇವತಾವನಗಳಲ್ಲಿ ವಿಹಾರಮಾಡಿಕೊಂಡು, ಬಹುಕಾಲಕ್ಕೆ ರಾಜಧಾನಿಗೆ ಬಂದು ಸೇರಿದನು. ಈಗ ಪ್ರಜೆಗಳನ್ನೆಲ್ಲಾ ಸತ್ಕರಿಸಿ ಸಂತೋಷಪಡಿಸುತ್ತಾ, ರಾಜ್ಯಪರಿಪಾಲನೆಯನ್ನು ಮಾಡುತ್ತಿರುವನು. ಈತನ ವಿಷಯದಲ್ಲಿ ಸಂತಾನವಿಲ್ಲದೇ ಇರುವದೊಂದೇ ಪ್ರಜೆಗಳ ಕೊರತೆಗೆ ಕಾರಣವೇ ಹೊರತು ಅನ್ಯಾಯ್ಯವದೂ ಇಲ್ಲ. ಈವೊತ್ತೇನೊ ಪುಣ್ಯಕಾಲವೆಂದು ಗಂಗಾಯಮುನಾ ಸಂಗಮದಲ್ಲಿ ಮಹಾರಾಣಿಯೊಡನೆ ಮಂಗಳಸ್ನಾನವನ್ನು ಮಾಡಿ, ಅಲಂಕಾರಮಾಡಿಕೊಳ್ಳುವದಕ್ಕೋಸ್ಕರ ಅಲಂಕಾರಮಂಟಪಕ್ಕೆ ಬಂದಿರುವನು; ಈಗಲೇ ನಾನು ಅಲ್ಲಿಗೆ ಹೋಗದೇ ಇದ್ದರೆ ಗಂಧಪುಷ್ಪಗಳಲ್ಲಿ ನನಗೆ ಬರುವ ಅಗ್ರಭಾಗವು ತಪ್ಪಿಹೋಗುವದು; ಆದ್ದರಿಂದ ಜಾಗ್ರತೆಯಾಗಿ ಅಲ್ಲಿಗೆ ಹೋಗುವೆನು.

(ಎಂದು ನಡೆದು ಬರುತ್ತಿರಲು)

ತೆರೆಯಲ್ಲಿ.—ಅಯ್ಯೋ! ಅಯ್ಯೋ! ಪಟ್ಟೆಬಟ್ಟೆಯನ್ನು ಹಾಸಿದ ಚಿನ್ನದ ತಟ್ಟೆಯಲ್ಲಿಟ್ಟುಕೊಂಡು ತರುತ್ತಿದ್ದ ಊರ್ವಶಿಯ ಚೂಡಾಭರಣ ರತ್ನವನ್ನು ಮಾಂಸಭ್ರಾಂತಿಯಿಂದ ಹದ್ದೆತ್ತಿಕೊಂಡು ಹೋಯಿತು.

ವಿದೂ.—(ಕೇಳಿ) ಆಹ! ಇದೇನು! ಆ ರತ್ನವು ಮಹಾರಾಜನು ಅತ್ಯಂತ ಬಹುಮಾನದಿಂದ ಇಟ್ಟುಕೊಂಡಿದ್ದ ಸಂಗಮನೀಯವೆಂಬ ಚೂಡಾರತ್ನ

---

*ಸೋಟು ರಾಗ—ಶಂಕರಾಭರಣ ॥ ॥ ಏಕತಾಳ ॥

ಈಗ ನಮ್ಮ ಮನವು ದೈವ । ಯೋಗದಿಂದಲಿ ॥ ನೀಗಿ ಚಿಂತೆಯನ್ನು ಚೆ । ನ್ನಾಗಿ ಸುಖಿಪ್ಪುದು ॥ ೧ ॥ ನಂದನಾದಿ ವನವಿಹಾರ । ದಿಂದ ಸುಖಿಸುತ ॥ ಇಂದು ನಮ್ಮ ರಾಜ್ಯಪುರಕೆ । ಬಂದು ಸೇರ್ದನು ॥ ೨ ॥ ಪಿತೃಸಿಂಹಾಸನವನ್ನು । ಭೂಷಿತೋಪದು ॥ ಸೇರಿ ಸತಿಯೊಡನೆ ರಾಜ್ಯ । ಭಾರಗೈವನು ॥ ೩ ॥

ಹಲ್ಲವೆ! ಅದನ್ನು ಹದ್ದೆತ್ತಿಕೊಂಡು ಹೋಯಿತೆ! (ಎಂದು ನೋಡಿ) ಇದೊ ಈ ಮಾತನ್ನು ಕೇಳಿ ನಮ್ಮ ಮಹಾರಾಜನು ಅಲಂಕಾರಮಾಡಿ ಕೊಳ್ಳುವದನ್ನು ಬಿಟ್ಟು, ಇತ್ತಲಾಗಿಯೇ ಬರುತ್ತಿರುವನು; ನಾನೂ ಆತನ ಸಮೀಪಕ್ಕೆ ಹೋಗಿ ಸೇರಿಕೊಳ್ಳುವೆನು. (ಎಂದು ತೆರಳುವನು.)

ಇಂತಿದು ಪ್ರವೇಶಕವು.

(ಬಳಿಕ ಸಂಭ್ರಾಂತನಾದ ಪರಿಜನರೊಡನೆ ರಾಜನು ಪ್ರವೇಶಿಸುವನು.)

ರಾಜಂ.—

ಕಂ॥ ಉತ್ತಮಮೆನಿಸಿದ ಮಣಿಯಂ।
ಮೊತ್ತಮೊದಲ್ ಕಳ್ದು ರಾಜ್ಯಪದದೊಳ್ ತನ್ನಾ॥
ಪತ್ತಂ ತಾನೇ ಕಳೆದ್ಯಂ।
ಚಿತ್ತಳ್ ಧೃತ ಪಾಪದ್ರೋಹಿಯದಾ ಚೋರಖಗಂ ॥ ೧ ॥

ಕಿರಾತಿಯು.—(ಪ್ರವೇಶಿಸಿ) ಮಹಾರಾಜನೆ ಇದೊ ನೋಡು, ಆ ಹದ್ದು ಚಿನ್ನದ ದಾರದಲ್ಲಿ ಪೋಣಿಸಿರುವ ಆ ದಿವ್ಯರತ್ನವನ್ನು ಕಚ್ಚಿಕೊಂಡು, ಈ ತೆರನಾಗಿ ಚಿತ್ರದಲ್ಲಿ ಬರೆದ ಪಕ್ಷಿಯಂತೆ ಆಕಾಶದಲ್ಲಿ ಸುತ್ತುತ್ತಿರುವದು.

ರಾಜಂ.—ಅಹ!

ವೃತ್ತ॥ ಗಗನಾಭ್ಯಂತರದೊಳ್ ವಿಚಿತ್ರಮೆನೆ ಸುತ್ತುತ್ತಂ ಮಹಾವೇಗದಿಂ।
ಮೊಗದೊಳ್ಪೊನ್ನೆಳೆಯಿಂದೆ ಕೋದಮಣಿಯಂಮುಂಗೊಕ್ಕಿನೊಳ್
ತಾಳ್ದು ಕೇ॥
ದಿಗನಾಪದ್ಮಗಹನಾ ವಿಲೋಕಿಪ್ಪುದೆ ಕಟ್ಟುತ್ತಿರ್ಕ್ಕಗಮಾಕಂಬರರ್।
ಬೆಗರಿಂ ಮಂಡಲರೇಖೆಯಂ ಜ್ವಲಿಪಸುತ್ತುಂಗೊಳ್ಳುಯಿಸುತ್ತು
ನ್ರೋಳ್॥ ೨ ॥

ಈಗ ಹ್ಯಾಗೆಮಾಡೋಣ?

---

*ರಾಗ—ಜಂಜೂಟ್॥ ॥ ಆದಿತಾಳ॥

ಆಗಸದೊಳು ಬಲು। ವೇಗದಿಂದದು॥ ಪೋಗುವದು ನೋಡ। ಸುಗುಣ ದ್ವಿಜ॥೧॥
ಕೆಂಪದಂಡಿನ ಮಣಿ। ಗೊಂಚಿದು ಜೋತಿಯ॥ ದಂಡವ ಸುತ್ತಿಪ್ಪೊಳು। ಮಂಡಲಗೆದಿಯು॥೨॥
ಮಿಂಚುಗುಳ ರನ್ನದ। ಚಲಸಮುಖದಿ॥ ಪರಿವೇಷದ ಕಟ್ಟು। ತ್ತಿರುವದು ನೋಡೋ॥೩॥

ವಿದೂ.—(ಸಮೀಪಕ್ಕೆ ಬಂದು) ಹ್ಯಾಗೆ ಮಾಡುವದೇನು ? ಸಾಕುಸಾಕು ನಿನ್ನ ಕರುಣೆ, ಈ ಅಪರಾಧಿಯನ್ನು ಬೇಗ ಶಿಕ್ಷಿಸು.

ರಾಜಂ.—ಹೌದು, ನೀನುಹೇಳಿದ್ದು ಸರಿ ; ಎಲ್ಲಿ ನನ್ನ ಧನುಸ್ಸು ?

ಯವನಿಕೆ.—ಇದೋತಂದೆನು. (ಎಂದು ತೆರಳಿದಳು)

ರಾಜಂ.—ಎಲ್ಲಿ ? ಆ ಕಳ್ಳಹದ್ದು ಕಣ್ಣಿಗೆ ಕಾಣದಹಾಗಾಯಿತು !

ವಿದೂ.— ಮಹಾರಾಜನೆ ಆ ರಣಹದ್ದು ಇತ್ತಲಾಗಿ ದಕ್ಷಿಣದಿಕ್ಕಿನ ಕೊನೆಯನ್ನು ಸೇರಿದಹಾಗೆ ಕಂಡುಬಂತು.

ರಾಜಂ.—(ತಿರುಗಿನೋಡಿ) ಇದೊ ಈಗ ಕಾಣುತ್ತಿರುವದು.

ಕಂ॥ ಮಿಸುಗುವ ಕದಿರ್ಗಳ್ ಬಳಸಿರ ।
ಲಸುಗೆಯ ಪೊಸಗೊಂಚಲಂತೆ ತೋರ್ಪ್ಪೆರ್ಗಮಣಿಯಿಂ ॥
ದೆಸೆವೆಣ್ಣಿನ ಮುಂದಲೆಯಂ ।
ಪಸದನಗೊಳಿಪಂತೆ ನೋಡಲಾಪದ್ದೆಗಸೆಗಂ ॥ ೩ ॥

ಯವನಿಕೆ.—(ಧನುರ್ಬಾಣಗಳನ್ನು ತೆಗೆದುಕೊಂಡುಬಂದು) ಮಹಾರಾಜನೆ ಇದೊ ಬಾಣಸಹಿತವಾದ ಧನುಸ್ಸು.

ರಾಜಂ.—ಈಗ ಧನುಸ್ಸಿನಿಂದತಾನೆ ಏನುಪ್ರಯೋಜನ ? ಆ ಹದ್ದಾಗಲೇ ಬಾಣಮಾರ್ಗವನ್ನು ಅತಿಕ್ರಮಿಸಿ ಹೊರಟು ಹೋಯಿತು. ಇದೊ

ಕಂ॥ ತಾರಗೆ ಪಚ್ಚೆಗೆ ಪದ್ಮರ್ಗ ।
ವಜ್ರರತ್ನ ಮಿರುಳ್ ಘನಾಭ್ರವಂಡದೆಬೆಳೆದಂ ॥
ಗಾರಳ ನಕ್ಷತ್ರದವೋಲ್ ।
ದೂರದೆಮಿಣಮಿಣನೆ ಮಿನುಗುತಿರ್ಕ್ಕುಂ ನೋಡಲ್ ॥ ೪ ॥

(ಎಂದು ಕಂಚುಕಿಯನ್ನು ನೋಡಿ) ಎಲೈ ಲಾತವ್ಯನೆ,

ಕಂಚು.—ಮಹಾರಾಜನೆ ಏನಪ್ಪಣೆ ?

ರಾಜ.—ಸಾಯಂಕಾಲದಲ್ಲಿ ಯಾವದಾದರೂ ಒಂದು ಮರದಮೇಲೆ ಹೋಗಿ ಸೇರತಕ್ಕ ಆ ಕಳ್ಳಹದ್ದನ್ನು ಹುಡುಕತಕ್ಕದ್ದೆಂದು ನಗರಾಧ್ಯಕ್ಷನಿಗೆ ಆಜ್ಞಾಪಿಸು.

ಕಂಚು.—ಮಹಾರಾಜನ ಅಪ್ಪಣೆಯಾದಂತೆ. (ಎಂದು ತೆರಳಿದನು.)

ವಿದೂ.—ಮಹಾರಾಜನೆ ಇನ್ನು ಕೂತುಕೊಳ್ಳಬಹುದು; ಆ ರತ್ನವನ್ನು ಕದ್ದಿರತಕ್ಕ ಹದ್ದು ಈಗ ಇನ್ನೆಲ್ಲಿತಾನೇ ಹೋದೀತು? ಅದೆಂದಿಗೂ ನಿನ್ನ ಆಜ್ಞೆಯಿಂದ ಬಿಡಿಸಿಕೊಳ್ಳಲಾರದು.

ರಾಜ.—ಒಳ್ಳೇದು ಆಗಲಿ. (ಎಂದು ವಿದೂಷಕನೊಡನೆ ಕೂತುಕೊಂಡು) ಎಲೈ ಮಿತ್ರನೆ,

ಕಂ॥ ಇನಿತಾದರಮಿಲ್ಲದು ಮಣಿ।
ಯೆನುತಾಪದ್ದೆಗತ್ತಿಕೊಂಡು ಪೋದಾಮಣಿಯೊಳ್॥
ಎನಗದರೊಳಿನಿತಾದರ।
ಮಿನಿಯಳನೆನ್ನೊಂದುಗೂಡಿಸಿತ್ತದನಾತ್ತಂ॥ ೫॥

ವಿದೂ.—ಮಹಾರಾಜನೆ ಈ ನಿನ್ನ ಮಾತಿನಿಂದ ಊರ್ವಶೀಸಹಿತನಾಗಿ ನೀನು ದೇವತಾವನಗಳಲ್ಲಿ ವಿಹರಿಸುತ್ತಿದ್ದಾಗ ನಡೆದ ಸಂಗತಿಗಳೆಲ್ಲಾ ತಿಳಿದುಬಂದಹಾಗಾಯಿತು.

(ಬಳಿಕ ಬಾಣದೊಡನೆ ರತ್ನವನ್ನು ಹಿಡಿದುಕೊಂಡು ಕಂಚುಕಿಯೂ ಕಿರಾತಿಯೂ ಪ್ರವೇಶಿಸುವರು.)

ಕಂಚು.—ಮಹಾರಾಜನಿಗೆ ಜಯವಾಗಲಿ.

ಕಂ॥ ಕರರೂಪವನಾಂತೀ ನಿ।
ನ್ನರುಕೋಪದೆ ಗಾಸಿವಡೆದು ತಸ್ಕರರತ್ನಂ॥
ಶರಸಂತತಿಕ್ಷದಿಂದಂ।
ಶರಣವೊಡೆದ ನಡುವೆ ಕೆಡೆದು ದಾಟೋರಣಗಂ ॥ ೬ ॥

ಎಲ್ಲರೂ.—(ಆಶ್ಚರ್ಯವನ್ನು ನಟಿಸುವರು)

ವಿದೂ.—(ಸಂತೋಷದಿಂದ) ಭಾಪು! ಮಹಾರಾಜನೆ ಭಾಪು! ನಿನಗೆ ಪುತ್ರೋತ್ಸವವೂ ಆಗಿರುವದೆ?

ರಾಜ.—ಮಿತ್ರನೆ ಈ ವಿಷಯವು ಸಂತೋಷಕರವಾದದ್ದೇಸರಿ; ಆದರೆ ಮಹರ್ಷಿಗಳ ಯಾಗರಕ್ಷಣೆಗೋಸ್ಕರ ನೈಮಿಶಾರಣ್ಯಕ್ಕೆ ಹೋಗಿದ್ದಾಗ ಹೊರತಾಗಿ ಇನ್ನ್ಯಾವಾಗಲೂ ನಾನು ಊರ್ವಶಿಯನ್ನು ಒಂದು ಕ್ಷಣವೂ ಅಗಲಿರವನಲ್ಲ; ಹೀಗಿದ್ದ ನಾನು ಆಕೆಯು ಗರ್ಭಿಣಿಯಾದದ್ದನ್ನೇ ಅರಿಯೆ; ಹೀಗಿರುವಲ್ಲಿ ಪುತ್ರೋತ್ಪತ್ತಿಯಾದ ವಿಷಯವು ನನಗೆ ತಿಳಿಯದೆಂಬುವದನ್ನು ನಾ ಹೇಳಬೇಕೆ? ಆದರೆ,

ಕಂ॥ ಕೆಲವುದಿನವಮಾಸಭ್ರಾಂಗಿಯು |
ಲಳಿತಾಂಗಂ ರಂಜಿಸುತ್ತಮಿಂದ್ವರ್ಗದು ಲವಲೀ |
ಫಲಪಾಂಡುಮುಖದ್ಯುತಿಯಿಂ |
ದಲಸೇಕ್ಷಣದಿಂದೆ ಮಲಿನಚೂಚುಕರುಚಿಯಿಂ ॥ ೮ ॥

ವಿದೂ.—ಹೀಗೆಲ್ಲಾ ಮನುಷ್ಯಸ್ತ್ರೀಯರ ಸ್ವಭಾವವನ್ನು ದಿವ್ಯಲೋಕದ ಸ್ತ್ರೀಯರಲ್ಲಿ ನೀನೆಣಿಸಬೇಡ, ಮಹಾತ್ಮರಾದ ದೇವತಾಸ್ತ್ರೀಯರ ನಡನಳಿತವು ಸಾಧಾರಣವಾಗಿ ನಮಗೆ ಗೊತ್ತಾಗತಕ್ಕದ್ದಲ್ಲ.

ರಾಜ.—ನೀನು ಹೇಳಿದಂತೆಯೇ ಆಗಲಿ, ಆದರೆ ಆಕೆಯು ಪುತ್ರನನ್ನು ಮರೆಸುವದಕ್ಕೆ ಕಾರಣವೇನು?

ವಿದೂ.—ಬೇರೆ ಕಾರಣ ಯಾವದು? ಹೆತ್ತಮೇಲೆ ಹೆಂಡತಿಯಲ್ಲಿ ಗಂಡನಿಗೆ ಪ್ರೀತಿ ಕಡಮೆಯಾಗುವದೆಂದು.

ರಾಜ.—ಮಿತ್ರನೆ ಪರಿಹಾಸ್ಯ ಸಾಕು, ಚೆನ್ನಾಗಿ ಯೋಚಿಸು.

ವಿದೂ.—ದೇವತಾರಹಸ್ಯವನ್ನು ಯೋಚಿಸಿ ತಿಳಿಯುವದಕ್ಕಾದೀತೆ?

ಕಂ.—(ಬಂದು) ಮಹಾರಾಜನಿಗೆ ಜಯವಾಗಲಿ; ಮಹಾರಾಜನೆ ಚ್ಯವನಮಹರ್ಷಿಗಳ ಆಶ್ರಮದಿಂದ ಒಬ್ಬ ತಾಪಸಿಯು ಒಬ್ಬ ಕುಮಾರನನ್ನು ಕರಕೊಂಡು ತಮ್ಮನ್ನು ಕಾಣುವದಕ್ಕೆ ಬಂದಿರುವಳು.

ರಾಜಂ.—ಅವರನ್ನು ಬೇಗ ಕರೆದುಕೊಂಡುಬಾ.

ಕಂ.—ಅಪ್ಪಣೆ (ಎಂದು ಹೋಗಿ ಧನುರ್ಧಾರಿಯಾದ ಕುಮಾರನೊಡನೆ ತಾಪಸಿಯನ್ನು ಕರೆದುಕೊಂಡುಬಂದು) ಎಲೌ ಪೂಜ್ಯಳೆ ಹೀಗೆ ದಯಮಾಡಿಸಬೇಕು.

(ಎಲ್ಲರೂ ನಡೆಯುವರು.)

ವಿದೂ.—(ಕುಮಾರನನ್ನು ನೋಡಿ) ಮಹಾರಾಜನೆ ಈತನು ಕ್ಷತ್ರಿಯ ಕುಮಾರನಂತೆ ಕಾಣಿಸುವನು. ಈತನಲ್ಲಿ ನಿನ್ನ ಹೋಲಿಕೆ ವಿಶೇಷವಾಗಿ ರುವದ್ದರಿಂದ ಆ ಹದ್ದನ್ನು ಸಂಹರಿಸಿದ ಈ ಬಾಣವು ಈತನದಾಗಿಯೇ ಇರಬಹುದು.

ರಾಜಂ.—ಇದ್ದರೂ ಇರಬಹುದು. ಅದ್ದರಿಂದಲೇ,

*ಕಂ॥ ಹೃದಯದೆ ವಾತ್ಸಲ್ಯಂ ನೇ।
ತ್ರದೆ ಬಾಷ್ಪಂ ತಿಳಿವು ಮನದೆ ನಡುಕಂ ಕರದೊಳ್॥
ಉದಯಿಸೆ ಧೈರ್ಯಂ ವಿಗಳಿಸೆ।
ಮೊದಲಾಂ ಬಿಗಿದಿವನ ನಪ್ಪಿಕೊಳಲೆಳಸಿದಪೆಂ॥ ೯॥

ಕಂ.—ಹೀಗೆ ನಿಂತುಕೊಳ್ಳಿರಿ.

(ತಾಪಸೀಕುಮಾರರು ಒಂದುಕಡೆ ನಿಂತುಕೊಳ್ಳುವರು.)

ರಾಜಂ.—ಎಲೌ ಪೂಜ್ಯಳೆ ವಂದಿಸುವೆನು.

ತಾಪಸಿ.—ಎಲೈ ಮಹಾರಾಜನೆ ಚಂದ್ರವಂಶೋದ್ಧಾರಕನಾಗು. (ತನ್ನಲ್ಲಿ ತಾನು) ಯಾರೂ ಹೇಳದೇ ಇದ್ದಾಗ್ಯೂ ಈ ರಾಜರ್ಷಿಗೂ ಈ ಕುಮಾರನಿಗೂ ಔರಸಸಂಬಂಧವು ಚೆನ್ನಾಗಿ ಗೊತ್ತಾಗುತ್ತಿರುವದು. (ಪ್ರ) ವತ್ಸನೆ ನಿನ್ನ ತಂದೆಗೆ ನಮಸ್ಕಾರಮಾಡು.

---

*ರಾಗ—ಧಜಾ॥ ॥ಏಕತಾಳ॥

ಬಾಲಕನಿವನನು ನೋಡಿ। ಆನಂದಕೋರ್ಬ್ಬೀದು। ಮಾನಸದೊಳೇನಿದು॥ ಪ॥
ಈ ನೇತ್ರಯುಗದೊಳ। ಗಾನಂದಬಾಷ್ಪವು। ನೀ ನೋಡುಬರುತಿದೆ। ತಾನೀಗಳೇನಿದು॥
ಹೃದಯದಿವಾತ್ಸಲ್ಯ। ವುದಯಿಸುತಿರುತ್ತಿದೆ। ಇದ ಕೇನೊ ಕಾರಣ। ವದಕಾಣೆನೇನಿದು॥
ಈ ಲಲಿತಾಂಗನ। ಆಲೋಕಿಸಲುಬಗಿ। ದಾಲಿಂಗಿಸಲುಮನ। ಕಾಕಾಂಕ್ಷೆಯೇನಿದು॥ ೧॥

ಆಯುಸ್ಸು.—(ಧನುಸ್ಸಿನೊಡನೆ ಕೈಜೋಡಿಸಿಕೊಂಡು ವಂದಿಸುವನು.)

ರಾಜಂ.—ಆಯುಷ್ಮಂತನಾಗು.

ಆಯು.—(ತನ್ನಲ್ಲಿ ತಾನು)

ಕಂ॥ ತಂದೆಯಿವನೆನಗಿವಂ ಗಾಂ ।
ನಂದನನೆಂದರಿಯಲಿನಿತೆನಿಪ್ಪ್ರಣಿಸ್ನೇಹಂ ॥
ತಂದೆಗಳಂಕದೆವೃದ್ಧಿಯು ।
ನೊಂದಿದ ಸುತರ್ಗೆನಿತು ನೇಹವೋತಂದೆಗಳೊಳ್ ॥ ೧೦ ॥

ರಾಜಂ.—ಎಲೌ ಪೂಜ್ಯಳೆ ನೀನು ಬಂದಕಾರಣವೇನು ?

ತಾ.—ಮಹಾರಾಜನೆ ಕೇಳಬೇಕು ; ಊರ್ವಶಿಯು ದೀರ್ಘಾಯುಷ್ಮಂತನಾದ ಈ ಆಯುಃಕುಮಾರನನ್ನು ಹೆತ್ತ ಕೂಡಲೆ ಯಾತಕ್ಕೋಸ್ಕರವೋ ನಿನಗೆ ತೋರಿಸದೆ ನನ್ನ ಕೈಸೇರಿಸಿದ್ದಳು; ಪೂಜ್ಯರಾದ ಚ್ಯವನಮಹರ್ಷಿಗಳು ಕ್ಷತ್ರಿಯರಿಗೆ ಉಕ್ತವಾಗಿರುವ ಕ್ರಮದಿಂದ ಈ ಚಿರಂಜೀವಿಗೆ ಜಾತಕರ್ಮಾದಿಗಳನ್ನು ನೆರವೇರಿಸಿರುವರು ; ಅವರಲ್ಲೇ ಇವನು ವಿದ್ಯಾಭ್ಯಾಸವನ್ನು ಮಾಡಿ ಧನುರ್ವಿದ್ಯವನ್ನೂ ಕಲಿತಿರುವನು.

ರಾಜಂ.—ಹಾಗಾದರೆ ಇವನು ಅನಾಥನಾಗಿರಲಿಲ್ಲ.

ತಾ.—ಈದಿವಸ ಇವನು ಋಷಿಕುಮಾರರೊಡನೆ ಹೂವನ್ನೂ ಸಮಿತ್ತನ್ನೂ ತರುವದಕ್ಕೆ ಹೋಗಿ ಋಷ್ಯಾಶ್ರಮಕ್ಕೆ ವಿರುದ್ಧವಾದ ಕೆಲಸವನ್ನು ಮಾಡಿದನು.

ವಿದೂ.—(ಬೆಚ್ಚಿಬಿದ್ದು) ಅದೇನು ?

ತಾ.—ಒಂದು ಹದ್ದು ಮಾಂಸಖಂಡವನ್ನು ಕಚ್ಚಿಕೊಂಡು ಒಂದು ಮರದಮೇಲೆ ಬಂದು ಸೇರುತ್ತಿತ್ತು ; ಅದನ್ನು ಇವನು ತನ್ನ ಬಾಣಕ್ಕೆ ಗುರಿಮಾಡಿದನು.

ವಿದೂ.—(ರಾಜನ ಮುಖವನ್ನು ನೋಡುವನು).

ರಾಜಂ.—ಆಮೇಲೆ ?

ತಾ.—ಆಮೇಲೆ ಈ ವೃತ್ತಾಂತವನ್ನು ಚ್ಯವನ ಮಹರ್ಷಿಗಳು ಕೇಳಿ, "ಊರ್ವಶಿಯು ನಿನ್ನ ಕಯ್ಯಲ್ಲಿ ಕೊಟ್ಟಿರುವ ಈ ಕುಮಾರನನ್ನು ಕರದು ಕೊಂಡುಹೋಗಿ ಆಕೆಯ ಕೈಸೇರಿಸಿ ಬಾ" ಎಂದು ನನಗಾಜ್ಞಾಪಿಸಿರುವರು. ಆದ್ದರಿಂದ ಈಗ ಊರ್ವಶಿಯನ್ನು ಕಾಣಲಿಚ್ಛೈಸುವೆನು.

ರಾಜಂ.—ಎಲೌ ಪೂಜ್ಯಳೆ ಹಾಗಾದರೆ ಈ ಪೀಠದಲ್ಲಿ ಕೂತುಕೊಳ್ಳ ಬಹುದು.

ತಾ.—ಒಳ್ಳೇದು. (ಎಂದು ಕೂತುಕೊಳ್ಳುವಳು).

ರಾಜಂ.—(ಕಂಚುಕಿಯನ್ನು ನೋಡಿ) ಎಲೈ ಲಾತವ್ಯನೆ ಊರ್ವಶಿಯನ್ನು ಕರದುಕೊಂಡು ಬರತಕ್ಕದ್ದು.

ಕಂ.—ಅಪ್ಪಣೆ. (ಎಂದು ಹೊರಟನು).

ರಾಜಂ.—(ಕುಮಾರನನ್ನು ನೋಡಿ)

ಕಂ॥ ಕಂದನನೊಯ್ದೆಪ್ಪಿಂಕುಕರಂ ।
ತಂದೆಯನಾಹ್ಲಾದಗೊಳಿಪುದಿಂದೂಪಳಮಂ ॥
ಚಂದಿರಕರವಾಹ್ಲಾದಿಸು ।
ವಂದದೊಳಿದರಿಂದಮಿತ್ತ ಬಾಲ್ಯವತ್ಸಾ ॥ ೧೧ ॥

ತಾ.—ವತ್ಸನೆ ನಿಮ್ಮ ತಂದೆಯನ್ನು ಸಂತೋಷಪಡಿಸು.

ಆಯು.—(ತಂದೆಯ ಬಳಿಗೆಬಂದು ಪಾದವಂದನೆಯನ್ನು ಮಾಡುವನು).

ರಾಜಂ.—(ಕುಮಾರನನ್ನು ಆಲಿಂಗಿಸಿಕೊಂಡು ಪಾದಪೀಠದಮೇಲೆ ಕೂರಿಸಿಕೊಂಡು) ವತ್ಸನೆ ನಿಮ್ಮ ತಂದೆಗೆ ಮಿತ್ರನಾದ ಈ ಬ್ರಾಹ್ಮಣನಿಗೆ ಭಯಪಡದೆ ನಮಸ್ಕಾರಮಾಡು.

ವಿದೂ.—ಯಾತಕ್ಕೆ ಭಯಪಡುವನು? ಇವನು ತಪೋವನದಲ್ಲಿದ್ದವನಾದಕಾರಣ ಇವನಿಗೆ ಕೋತಿಗಳ ಪರಿಚಯವಿದ್ದೇ ಇರಬಹುದು.

ಆಯು.—(ನಸುನಗುತ) ಆರ್ಯನೆ ವಂದಿಸುವೆನು. (ಎಂದು ನಮಸ್ಕರಿಸುವನು.)

ವಿದೂ.—ನಿನಗೆ ಮಂಗಳವಾಗಲಿ.

(ಬಳಿಕ ಊರ್ವಶಿಯೂ ಕಂಚುಕಿಯೂ ಪ್ರವೇಶಿಸುವರು).

ಕಂಚು.—ಎಲೌ ಪೂಜ್ಯಳೆ ಹೀಗೆ ದಯಮಾಡಿಸಬೇಕು.

ಊ.—(ನೋಡಿ) ಈ ಬಾಲಕನು ಯಾರು! ಧನುಸ್ಸನ್ನು ಹಿಡಿದಿರುವನು! ಮಹಾರಾಜನು ತನ್ನ ಪಾದಪೀಠದಮೇಲೆ ಕುಳಿತುಕೊಂಡು ಕೆದರಿಹೋದ ಈತನ ಮುಂದಲೆಕೂದಲನ್ನು ತಾನೇ ಗಂಟುಹಾಕುತ್ತಿರುವನು! (ತಾಪಸಿಯನ್ನು ನೋಡಿ) ಓಹೋ! ಪೂಜ್ಯಳಾದ ಸತ್ಯವತಿಯು ಬಂದಿರುವದ್ದರಿಂದ ಈಗಲೀಗ ಗೊತ್ತಾಯಿತು. ಇವನು ನನ್ನ ಪುತ್ರನಾದ ಆಯುಸ್ಸು. ಈಗ ದೊಡ್ಡವನಾಗಿರುವನು. (ಎಂದು ಮುಂದೆ ಬರುವಳು).

ರಾಜಂ.—(ಊರ್ವಶಿಯನ್ನು ನೋಡಿ ಆಯುಸ್ಸನ್ನು ಕುರಿತು)—

ಕಂ॥ ಎಲೆವತ್ಸನಿನ್ನ ನೀಕ್ಷಿಸೆ ।
ನೆಲಮಿಂದಂ ನಿನ್ನ ಜನನಿ ಬಂದಪಳದೊ ವ ॥
ತ್ಸಲತೆಯಿನೊಸರ್ದಪಕುಚದು ।
ಚ್ಛಲಿಸುವಮೇಲುದನೆತಳ್ತುನೇರ್ಪಡಿಸುತ್ತಂ ॥ ೧೬ ॥

ತಾ.—ವತ್ಸನೆ ನಿಮ್ಮತಾಯಿಯನ್ನು ಎದುರುಗೊಳ್ಳುತೆ.

ಆಯು.—(ಊರ್ವಶಿಯನ್ನು ಎದುರುಗೊಳ್ಳುವನು.)

ಊರ್ವ.—(ಪ್ರೀತಿಯಿಂದ ಮಗನನ್ನು ನೋಡುತ್ತ ಸತ್ಯವತಿಯನ್ನು ನೋಡಿ) ಎಲೌ ಪೂಜ್ಯಳೆ ವಂದಿಸುವೆನು.

ತಾ.—ಎಲೆ ಮಗಳೆ ಪತಿಸಂಮತೆಯಾಗಿ ಬಾಳು.

ಆಯು.—(ಊರ್ವಶಿಯ ಬಳಿಗೆ ಬಂದು) ಅಮ್ಮಾ ನಮಸ್ಕರಿಸುವೆನು.

---

ರಾಗ—ಶಂಕರಾಭರಣ ॥ ॥ ಆದಿತಾಳ ॥

ಬಾಲನಾವನು । ಶ್ರೀಲೋಲರೂಪನು ॥ ಪ ॥ ಆಜಾನು[illegible]ಯುಕ್ತ । ತೇಜಸ್ವಿನೋಡಲು । ರಾಜಲಕ್ಷಣದಿಂದ । ರಾಜಿಸುತಿರ್ಪನು ॥ ೧ ॥ ಕುಟಿಲನೀಲಾಳಕ । ಜಟಿಲಫಾಲನು ॥ ಸ್ಫುಟ ಕಮಲಾಕ್ಷನು । ಪಟುತರ ಶೀಲನು ॥ ೨ ॥ ಈ ಸಭೆಯೊಳು ಕನ । ಕಾಸನತಲದೊಳು । ವಾಸವಸುತನೋಲು । ಭಾಸಿಸುತಿರುವನು ॥ ೩ ॥

ಊ.—(ಕುಮಾರನನ್ನು ತಬ್ಬಿಕೊಂಡು ಮುದ್ದಾಡಿ) ಮಗನೆ ಸಕಲವಿಷಯ ದಲ್ಲೂ ತಂದೆಯನ್ನು ಮೆಚ್ಚಿಸುತ್ತಾ ಇರು. (ಎಂದು ರಾಯನಬಳಿಗೆ ಬಂದು) ಮಹಾರಾಜನಿಗೆ ಜಯವಾಗಲಿ.

ರಾಜ.—ಎಲೆ ಪುತ್ರವತಿಯೆ ನಿನಗೆ ಸುಖಾಗಮನವೆ ? ಇಲ್ಲಿ ಕೂತುಕೊ.

(ಎಂದು ತನ್ನ ಅರ್ಧಾಸನವನ್ನು ಬಿಡುವನು.)

ಊರ್ವ.—(ಸತ್ಯವತಿಯನ್ನು ನೋಡಿ) ಎಲೌ ಪೂಜ್ಯಳೆ ಕೂತುಕೊಳ್ಳಬೇಕು.

(ಎಲ್ಲರೂ ಅವರವರ ಸ್ಥಾನಗಳಲ್ಲಿ ಕೂತುಕೊಳ್ಳುವರು.)

ತಾ.—ಎಲೆ ಮಗಳೆ ಚಿರಂಜೀವಿಯಾದ ಈ ನಿನ್ನ ಮಗನು ವಿದ್ಯಾವಂತ ನಾಗಿ ದೊಡ್ಡವನಾಗಿರುವನು ; ಇದೊ ಇವನನ್ನು ನಿನ್ನ ಗಂಡನೆದುರಿಗೆ ನಿನ್ನ ಕಯ್ಯಲ್ಲಿ ಕೊಟ್ಟಿರುವೆನು ; ಕರದುಕೊ. ಆಶ್ರಮಧರ್ಮವು ನನ್ನ ಮನಸ್ಸನ್ನು ಸೆಳೆಯುವದ್ದರಿಂದ ನಾನು ಹೋಗಿಬರುವೆನು.

ಊರ್ವ.—ಎಲೌ ಪೂಜ್ಯಳೆ ನಿನ್ನನ್ನು ನೋಡಿ ಬಹಳ ದಿವಸಗಳಾದ್ದ ರಿಂದ ಈಗಲೇ ನಿನ್ನನ್ನು ಕಳುಹಿಸಿಕೊಡುವದಕ್ಕೆ ನನ್ನ ಮನಸ್ಸು ಬರು ವದಿಲ್ಲ; ಆದರೂ ಆಶ್ರಮಧರ್ಮಕ್ಕೆ ತಡೆಮಾಡತಕ್ಕದ್ದು ಸರಿಯಲ್ಲವಾದ್ದ ರಿಂದ ಹೋಗಿಬರಬಹುದು.

ರಾಜ.—ಆರ್ಯಳೆ ಪೂಜ್ಯರಾದ ಚ್ಯವನಮಹರ್ಷಿಗಳಿಗೆ ನನ್ನ ನಮಸ್ಕಾ ರವನ್ನು ತಿಳಿಸಬೇಕು.

ತಾ.—ಒಳ್ಳೇದು ತಿಳಿಸುವೆನು.

ಆಯು.—(ಸತ್ಯವತಿಯನ್ನು ನೋಡಿ) *ಅಮ್ಮಾ ನೀನು ನಿಜವಾಗಿ ಆಶ್ರಮಕ್ಕೆ ಹೋಗುವೆಯಾ ? ಹಾಗಾದರೆ ನನ್ನನ್ನೂ ಕರದುಕೊಂಡು ಹೋಗು.

---

*ರಾಗ—ಖರಹರಪ್ರಿಯ ॥ ॥ ತಾಳ—ಮಿಶ್ರಛಾಪು ॥

ಈಗಳೆ ಪೋಪೆಯಾ ತಾಯೆ । ಆ ಗುರುಸನ್ನಿಧಿಗೇ ಮಾನಿನಿಯೆ ॥ ನಾಗರಿಕನಿರ್ಮಿತ ಈ ಜನಸಮೂಹದ ನನ್ನನು ಬಿಟ್ಟು ॥ ೧ ॥

ಪೀನೋನ್ನತಸ್ತನದೆ ಕಂಬನಿಮಾಲೆಯಿಂದಂ |
ಮೀನಾಕ್ಷಿ ತಾರಸರವಂ ಪೆರತೊಂದಿಸುತ್ತಂ || ೧೪ ||

(ಎಂದು ಕಣ್ಣೀರೊರಸುವನು.

ಊರ್ವ.—ಮಹಾರಾಜನೆ ಕೇಳು, ಈ ಕುಮಾರನ ಮುಖಕಮಲವನ್ನು ನೋಡಿ ಸಂತೋಷಪಡುತ್ತ ಮರೆತಿದ್ದೆನು. ಈಗ ನೀನು ಇಂದ್ರನ ಹೆಸರನ್ನು ಹೇಳಿದ್ದರಿಂದ ನನ್ನ ನಿಬಂಧನೆಯು ಜ್ಞಾಪಕಕ್ಕೆ ಬಂದು ನನ್ನ ಮನಸ್ಸು ಕಳವಳಪಡಿಸಿತು.

ರಾಜಂ.—ನಿನ್ನ ನಿಬಂಧನೆಯೆಂಬುವದು ಯಾವದು ?

ಊರ್ವ.—ಮಹಾರಾಜನೆ ನಿನ್ನಲ್ಲಿ ಅನುರಕ್ತಳಾದ ನನಗೆ ಮಹೇಂದ್ರನು ಪೂರ್ವದಲ್ಲಿ ಒಂದು ಆಜ್ಞೆಯನ್ನು ಮಾಡಿದ್ದನು.

ರಾಜಂ.—ಏನೆಂತ ?

ಊರ್ವ.—ನನಗೆ ಪ್ರಿಯಮಿತ್ರನಾಗಿಯೂ ಮತ್ತು ನನಗೆ ಯುದ್ಧದಲ್ಲಿ ಸಹಾಯನಾಗಿಯೂ ಇರುವ ಪುರೂರವರಾಯನನ್ನು ನೀನು ಸೇರಿದ್ದು, ಆತನು ನಿನ್ನಲ್ಲಿ ಹುಟ್ಟಿದ ಪುತ್ರನ ಮುಖವನ್ನು ಯಾವಾಗ ನೋಡುವನೊ ಆಗ ಪುನಃ ನೀನು ನನ್ನ ಸಮೀಪಕ್ಕೆ ಬಂದುಬಿಡತಕ್ಕದ್ದೆಂದು ಆಜ್ಞಾಪಿಸಿದ್ದನು. ಆದ್ದರಿಂದ ಶೀಘ್ರವಾಗಿ ನಿನ್ನ ವಿಯೋಗವುಂಟಾಗುವದೆಂಬ ದಿಗಿಲಿನಿಂದ ನಾನು ಈ ಕುಮಾರನನ್ನು ಹುಟ್ಟಿದಕ್ಷಣವೇ ವಿದ್ಯಾಭ್ಯಾಸ ನಿಮಿತ್ತವಾಗಿ ಪೂಜ್ಯರಾದ ಚ್ಯವನಮಹರ್ಷಿಗಳ ಆಶ್ರಮದಲ್ಲಿ ಯಾರೂ ಕಾಣದಂತೆ ಆರ್ಯಳಾದ ಸತ್ಯವತಿಯ ಕೈಸೇರಿಸಿದ್ದೆನು ; ಈ ಚಿರಂಜೀವಿಯು ಈಗ ದೊಡ್ಡವನಾಗಿ ನಿನ್ನ ಸನ್ನಿಧಿಯನ್ನು ಸೇರಿದನು. ಇಲ್ಲಿನವರೆಗೆ ನಾನು ನಿನ್ನೊಡನೆ ಇದ್ದದ್ದಾಯಿತು. ಇನ್ನು * ಮಹೇಂದ್ರನಪ್ಪಣೆಯಂತೆ ನಡೆದುಕೊಳ್ಳುವೆನೆಂಬುವದಕ್ಕೆ ನನ್ನ ಬಾಯಿಬರದು.

---

*ರಾಗ—ನಾದನಾಮಕ್ರಿಯೆ || || ಮಿಶ್ರಛಾಪು ||

ಪ್ರಿಯನೇ | ಸುಂದರನಿಜಕಾಯನೇ || ಪ || ಹೋಗಿಬರುವೆನಾ | ನೀಗೆಂಬರದಲ್ಲಿ ||
ಗಾಗಿಸನ್ನು ತಗುಲಿ | ಭೋಗದೇವೇಂದ್ರನೇ || ೧ || ಪರಗುಣಿನಾದಿ | ತರಳನು ನಿನಗೆ ||
ಮೊರೆಯುಲ್ಲನ್ನು ಪ್ರಿಯ | ನೆರವೇರುದುಪಾಪ || ೨ || ಸುರಪನಾಜ್ಞೆಯಿಂ | ಶಿರಮೆನುನಾನು ||

ರಾಜಾ.—ಹಾ ! (ಎಂದು ಮೂರ್ಛೆಯನ್ನು ಹೊಂದುವನು).

(ಎಲ್ಲರೂ ವ್ಯಸನವನ್ನು ನಟಿಸುವರು).

ಊರ್ವ.—*ಪ್ರಿಯನೆ ಸಂತೈಸಿಕೊ ಸಂತೈಸಿಕೊ ಯಾತಕ್ಕೆ ಇಷ್ಟೊಂದು ವ್ಯಸನಪಡುವೆ ?

ಕಂ.—ಮಹಾರಾಜನೆ ಸಂತೈಸಿಕೊಳ್ಳಬೇಕು ಸಂತೈಸಿಕೊಳ್ಳಬೇಕು.

ರಾಜಾ.—(ಮೆಲ್ಲನೆದ್ದು ನಿಟ್ಟುಸುರುಬಿಟ್ಟು) ಅಯ್ಯೋ ! ಪ್ರಾಣಿಗಳ ಸುಖ ವಿಷಯದಲ್ಲಿ ದೈವದ ಅಸಹನವು ಆಶ್ಚರ್ಯಕರವಾದದ್ದು.

†ವೃತ್ತ॥ ತನಯನ ಜನ್ಮದಿಂದೊದವಿದುತ್ಕಟಸಂಮದದಿಂದೆ ಸಂತಸಿ ।
ಟ್ಟನಗೊದಗಿಂತು ತೋರಿತು ಕೃಶೋದರಿ ನಿನ್ನ ವಿಯೋಗವೇ ॥
ದನೆ ಬೇಸಗಾರದೆಮುಗಿಳಯೊಳಾತಪತಾಪಮುಳುಂಗಿ ತಪ್ಪನಾಂ ।
ತನುಪಿದದೊಳ್ಮರಕ್ಕೆ ಪೊಡೆದಂತಿರೆ ಪೊಲ್ಸಿಡಿಲಕ್ಕಟಕ್ಕಟಾ ॥ ೧೬ ॥

ವಿದೂ.—ಮಹಾರಾಜನೆ ರಾಜ್ಯಭಾರಸಮರ್ಥನಾದ ಕುಮಾರನು ನಿನಗೆ ದೊರೆತ ಕೂಡಲೇ ಕುಲಪದ್ಧತಿಯ ಪ್ರಕಾರ ನೀನು ನಾರುಮಡಿಯನ್ನುಟ್ಟು ಕೊಂಡು ತಪಸ್ಸನ್ನು ಮಾಡುವದಕ್ಕಾಗಿ ಅರಣ್ಯಕ್ಕೆ ಹೊರಡಬೇಕಾಯಿ

---

* ರಾಗ.—ತೋಡಿ ॥ ॥ ಮಿಶ್ರಛಾಪು ॥

ನನಗಾಗಿನಿಕ್ಕೇತಕೆ ನಿಂ ರಮಣ ॥ ಮನದೊಳ್ಮರುಗುತ್ತಿರುವೇ ಸುಗುಣ ॥ ೧ ॥ ಪಣೆಯೊಳ್ ಬರೆದಾವಿಧಿಯಾಜ್ಞೆಯನು ॥ ಕ್ಷಣವಾದರು ಮೀರುವನಾವವನು ॥ ೨ ॥ ಪ್ರಿಯನೇ ಬಿಡು ನನ್ನ ಯಚಿಂತೆಯನು ॥ ಜಯವಾಗಲಿ ನಾನಿದೊ ಪೋಗುವೆನು ॥ ೩ ॥

† ರಾಗ.—ಮಾಂಜಿ ॥ ॥ ಮಿಶ್ರಛಾಪು ॥

ನಾನೆಂತು ಸೈರಲಿ ಕಾಂತೆ । ನೀನಿಂತು ನುಡಿಯೆ ಮಾನಿನಿ ವರಳೆ ॥ ಪ ॥ ಸರಸಿಜಲೋಚನೆ । ಶಶಿಬಿಂಬವದನೇ । ಪರಭೃತಮಂಜುಳವಚನೇ ॥ ಸುರಪತಿಯಾಜ್ಞೆಯು । ನಿರುಪಮ ತೆಬಿಡಿಸಿರೆ । ಪುರಕೆ ಪೋಗುವ ಮಮತೆಯಿಂದ । ನೀನಿಂತು ನುಡಿಯೆ ॥ ೧ ॥ ಸರಿಯುಂದದಂತೆನು । ಪೊರೆದನು ಸದದೆ । ಮರಕೆ ಹಾಗಿದ ಪೊಲಸಿಡಿಲು ॥ ತರಳನ ಜನ್ಮದಿ । ಹರುಷದೊಳಿರ್ದನ ॥ ಗರ್ವಬಂದುದು ನಿನ್ನ ವಿರಹ । ನೀನಿಂತು ನುಡಿಯೆ ॥ ೨ ॥

ಕೆಂದು ನಾನು ಯೋಚಿಸಿದ್ದೆ; ಅದಕ್ಕೆ ಹಠಾತ್ತಾಗಿ ಇದೊಂದು ಕಾರ
ಣವೂ ಒದಗಿತು. ವನಹತಕ್ಕದ್ದೇನು !

ಊರ್ವ.—ಹಾ ಹಾ ! ಮಹಾರಾಜನೆ ನೀನು ಸಮರ್ಥನಾದ ಪುತ್ರನು
ದೊರೆದನೆಂದು ರಾಜ್ಯಪರಿಪಾಲನೆಯಲ್ಲಿ ನಿರಾತಂಕನಾಗಿ, ತಪ್ಪಿಲ್ಲದೆ ನಿನ್ನ
ನ್ನು ಅಗಲುವ ಯೋಚನೆಯುಳ್ಳ ಮಂದಭಾಗ್ಯಳಾದ ನನ್ನನ್ನು ಸಂಗ
ಡಲೇ ಸ್ವರ್ಗಕ್ಕಾದರೂ ಬಂದು ಅನುವರ್ತಿಸಬೇಕೆಂದು ಯೋಚಿಸು
ವೆಯೊ ಏನೊ !

ರಾಜಂ.—ಪ್ರಿಯೆ ಮಂದಭಾಗ್ಯಳೆಂದು ಯಾತಕ್ಕೆ ಆತ್ಮನಿಂದೆಯನ್ನು
ಮಾಡಿಕೊಳ್ಳುವೆ ?

*ವೃತ್ತ॥ ಸುಖವಿಯೋಗವಪ್ಪ ಪರತಂತ್ರತೆ ಪೂರಿಸಲಾಪ್ಪುದಿಲ್ಲ ತ ।
ನ್ನೆಳವಸಿಂದ್ರನಾಜ್ಞೆಯೊಳ್ ನೀನದರಿಂ ಪ್ರಿಯೆಯಾನಮೀಮಹೀ॥
ವಳಯದ ಭಾರಮಂ ತವತನೂಭವನಾದ ಚಿರಾಯುವಾಯುವಿಂ ।
ತಳೆಯಿಸಿ ಸಂಚರನ್ಮೃಗಕುಲಂಗಳನೊಪ್ಪುವರಣ್ಯಕೈದುವೆಂ ॥ ೧೭ ॥

ಆಯು.—ತಂದೆಯೇ ನೀನು ಹೀಗೆ ಯೋಚಿಸಕೂಡದು ; ತಿದ್ದಿದ
ದೊಡ್ಡ ಎತ್ತಿನ ಭಾರವನ್ನು ಹೋರಿಯು ಹೊರಬಲ್ಲದೆ ?

ರಾಜಂ.—ವತ್ಸನೆ ಕೇಳು—

ವೃ॥ ಮರಿಯಾಗಿದ್ದೊಡೆ ಗಂಧವದ್ದಂತಿಕುಲಮಂ ಸೊಕ್ಕಾನೆ ತಾಂ ಮೀರದೇ
ಪಿರಿದುಂ ವೇಗಮನಾನ ವಿಕ್ರಮಮೆ ವಿಷಂ ಬಾಲೋರಗೇಯುಂ ನೃಪಂ ॥

---

*ರಾಗ.—ಆನಂದಭೈರವಿ ॥ ॥ ಮಿಶ್ರಛಾಪು ॥

ಪ್ರಿಯೆಯೇ । ನಿನ್ನ ಸ್ನೇಹಕ್ಕೆ ನಾ ನಿರ್ವಹಿಸುವೆ । ನನ್ನಯ ಪ್ರಾಣ ॥ ಪ ॥ ವಿರಹ
ಕಾರಣವಾದ । ಪರತಂತ್ರಭಾವವು ॥ ನಿರಾತಂಕವಿಪ್ಪನ್ನ । ನೆರವೇರಿಸುವುದಿಲ್ಲ ॥ ೧ ॥
ಸ್ವರಾಜನಾಜ್ಞೆಯು । ಮೀರದಂದದಿ ನೀನು ॥ ಸಾರುವುದುಚಿತವ್ವಂ । ದಾರಕನಾಗಳಗೆ
ತನಯನೊರೆರಾಜ್ಯ । ವನು ನಿಯಮಿಸಿ ನಾನು ॥ ಅನಘತಪೋವನ । ವನು ಸವಾಶ್ರ

ಧರೆಯುಂ ಬಾಲಕನಾದೊಡಂ ಪ್ರೌಢಿಯೊಳಾರ್ಪ್ಪರ್ಗಂ ಪ್ರಾಯದಿಂದಕ್ಕುಮೇಂ
ನೆರವಿಕ್ಕರ್ಗಂ ನಿಜಜಾತಿಸಿದ್ಧಮಿವನೋಜಃ ಶಾತ್ಮಕ್ರಿಯಾರ್ಹಂ ಗುಣಂ ॥

ಎಲೈ ಕಂಚುಕಿಯೆ ಚಿರಂಜೀವಿಯಾದ ಆಯುಃಕುಮಾರನ ರಾಜ್ಯಾಭಿಷೇಕಕ್ಕೆ ತಕ್ಕ ಸನ್ನಾಹವನ್ನು ಮಾಡಬೇಕೆಂದು ನಮ್ಮ ಮಂತ್ರಿಗಳಿಗೆ ತಿಳಿಸತಕ್ಕದ್ದು.

ಕಂ.—ಮಹಾರಾಜನ ಅಪ್ಪಣೆಯಾದಂತಾಗಲಿ.

(ಎಂದು ಹೊರಡುತ್ತಾ ತೆರಳುವನು).

(ಎಲ್ಲರೂ ತೇಜಸ್ಸಿನಿಂದ ಕಣ್ಣು ಕೋರೈಸಿದ್ದನ್ನು ನಟಿಸುವರು).

ರಾಜಂ.—ಇದೇನು! ಮೇಘವಿಲ್ಲದೆ ಸುಮ್ಮನೆ ಮಿಂಚುಮಾತ್ರ ಮಿಂಚುತ್ತಿರುವದು.

ಊರ್ವ.—ಓಹೋ! ಪೂಜ್ಯರಾದ ನಾರದರು ದಯಮಾಡಿಸಿದರು.

ರಾಜಂ.—ಏನು! ಪೂಜ್ಯರಾದ ನಾರದರೆ? (ನೋಡಿ) ಆಹ!

ವೃತ್ತ॥ ಜಡೆಪೋಲುತ್ತಿರೆ ಕರ್ಪುರಕ್ಕೊಂಬಲಲಸದೆಗ್ಗಳಿಕೊಂಚನಾರೇಖೆಯಿಂ ।
ಕಡೆಗಣ್ಣುತ್ತಿರೆ ನಾದದಿಂದುಕಳೆಯಿಂ ಯಜ್ಞೋಪವೀತಂ ಸಿತಂ ॥
ಬಿಡದೊಳ್ಮುತ್ತಿನ ಮಾಲೆಯಿಂ ತೊಳೆದು ಪೊಂಬೆಳ್ಗಳ್ಗೊಪ್ಪುತ್ತಿರಲ್ ।
ನಡೆತರ್ಪಂತಿರೆ ಪಾರಿಜಾತತರು ತಾನೀ ನಾರದಂ ತೋರ್ದ್ದಪಂ ॥

(ಎಂದು ಊರ್ವಶಿಯನ್ನು ನೋಡಿ) ಎಲ್ಲಿ ಪೂಜಾದ್ರವ್ಯ?

ಊರ್ವ.—(ಪೂಜಾದ್ರವ್ಯವನ್ನು ತೆಗೆದುಕೊಂಡುಬಂದು) ಇದೋ ಪೂಜಾದ್ರವ್ಯ ಸಿದ್ಧವಾಗಿರುವದು.

ನಾರದರು.—(ಬಂದು) ಎಲೈ ಭೂಮೀಶ್ವರನೇ ಜಯಶೀಲನಾಗು.

ರಾಜಂ.—(ಊರ್ವಶಿಯ ಹಸ್ತದಿಂದ ಪೂಜಾದ್ರವ್ಯವನ್ನು ತೆಗೆದುಕೊಂಡು ನಾರದರನ್ನು ಸತ್ಕರಿಸಿ) ಪೂಜ್ಯರೆ ನಮಸ್ಕರಿಸುವೆನು.

ಊರ್ವ.—ಮಹಾತ್ಮರಿಗೆ ವಂದಿಸುವೆನು.

ನಾರ.—ನೀವಿಬ್ಬರೂ ಅಗಲದೇ ಇರಿ.

ರಾಜಂ.—(ತನ್ನಲ್ಲಿತಾನು) ಹೀಗಾದೀತೆ? (ಪ್ರಕಾಶ) ಈ ಪೀಠದಲ್ಲಿ ದಯಮಾಡಿಸಬೇಕು.

(ನಾರದರು ಪೀಠದಲ್ಲಿ ಕೂತುಕೊಂಡಮೇಲೆ ಎಲ್ಲರೂ ಕೂತುಕೊಳ್ಳುವರು)

ನಾರ.—ಎಲೈ ಮಹಾರಾಜನೆ ದಿವ್ಯದೃಷ್ಟಿಯುಳ್ಳ ದೇವೇಂದ್ರನು ತಪೋವನಕ್ಕೆ ಹೋಗುವದಕ್ಕೋಸ್ಕರ ಯತ್ನಿಸಿರುವ ನಿನಗೆ ಈ ಮಾತನ್ನು ಹೇಳಿ ಕಳುಹಿಸಿರುವನು.

ರಾಜಂ.—ಅದೇನಾಜ್ಞಾಪಿಸುವನು? ಅಪ್ಪಣೆಯಾಗಬೇಕು.

ನಾರ.—ಕಾಲತ್ರಯವನ್ನು ತಿಳಿದಿರುವ ಮಹರ್ಷಿಗಳು ಮುಂದೆ ದೇವಾಸುರರಿಗೆ ಯುದ್ಧ ನಡೆಯುವದೆಂದು ಹೇಳಿರುವರು. ಆದ್ದರಿಂದ ನನಗೆ ಯುದ್ಧದಲ್ಲಿ ಸಹಾಯನಾಗಿರತಕ್ಕ ನೀನು ಶಸ್ತ್ರತ್ಯಾಗವನ್ನು ಮಾಡಿ ತಪೋವನಕ್ಕೆ ಹೋಗಕೂಡದೆಂತಲೂ ನಿನಗೆ ಧರ್ಮಪತ್ನಿಯಾಗಿರುವ ಊರ್ವಶಿಯು ನಿನ್ನ ಯಾವಜ್ಜೀವವೂ ನಿನ್ನ ಸಮೀಪದಲ್ಲೇ ಇರಬಹುದೆಂತಲೂ ಹೇಳಿರುವನು.

ಊ.—ಈಗ ನನ್ನ ಮನೋವ್ಯಥೆ ಪರಿಹಾರವಾಯಿತು.

ರಾಜಂ.—ದೇವೇಂದ್ರನ ಅಪ್ಪಣೆಯಾದಂತೆ ನಡೆದುಕೊಳ್ಳುವೆನು.

ನಾರದ —*ಕಂ ॥ ಸುರಪತಿ ನಿನ್ನಿಷ್ಟವ ನಾ ।
ಚರಿಪಂ ನೀನಾತನಿಷ್ಟಮಂ ಸಲಿಪುದು ಭೂ ॥
ಸ್ಮರನಗ್ನಿಯು ನಿಜತೇಜದೆ ।
ಪೊರೆವಂತಿರೆ ಪೊರೆವನಲ್ತೆ ಶಿಖಿಯುಂ ರವಿಯುಂ । ೨೦ ॥

---

* ॥ ರಾಗ—ಶಹಾನ ॥ ॥ ರೂಪಕತಾಳ ॥

ಸ್ವಾರಾಜಮಿತ್ರನೇ । ಶಾರೇಶಕಾಲಜನೇ ॥ ಪ ॥ ದಿವಿಜಪತಿಯುನಿನ್ನ ಕಾವ । ತವನು ಸಲ್ಲಿಪಂ ॥ ಅವನಕಾಮಿತವನು ನೀನು । ಮಂತುಸಲ್ಲಿಸೈ ॥ ೧ ॥ ತರಣಿತನ್ನ ತೇಜದಿಂದ । ಪೊರೆವನಗ್ನಿಯುಂ ॥ ಪೊರೆವನಲೆ ರವಿಯನಾ । ತೆರದೊಳಗ್ನಿಯು ॥ ೨ ॥

(ಆಕಾಶದಲ್ಲಿ ನೋಡಿ) ಎಲೆರಂಭೆ, ಆಯುಃಕುಮಾರನ ಯೌವರಾಜ್ಯಾಭಿಷೇಕಸಾಮಗ್ರಿಗಳನ್ನು ಬೇಗ ಸಿದ್ಧಪಡಿಸತಕ್ಕದ್ದು.

ಅಪ್ಸರಸ್ತ್ರೀಯರು.—(ಪ್ರವೇಶಿಸಿ) ಮಹಾತ್ಮರೆ ಇದೊ ಪಟ್ಟಾಭಿಷೇಕಸಾಮಗ್ರಿಯು ಸಿದ್ಧವಾಗಿರುವದು.

ನಾರ.—ಈ ಆಯುಃಕುಮಾರನನ್ನು ಈ ಸಿಂಹಾಸನದಮೇಲೆ ಬೇಳಿಸತಕ್ಕದ್ದು.

ರಂಭೆ.—ವತ್ಸನೆ ಇತ್ತ ಬಾ. (ಎಂದು ಸಿಂಹಾಸನದಮೇಲೆ ಕೂರಿಸುವಳು)

ನಾರ.—(ಸುವರ್ಣಕಲಶೋದಕದಿಂದ ಪಟ್ಟಾಭಿಷೇಕವನ್ನು ಮಾಡಿ). ಎಲೆ ರಂಭೆ ಕುಮಾರನಿಗೆ ಉಳಿದ ರಾಜೋಪಚಾರಗಳನ್ನೆಲ್ಲಾ ನೆರವೇರಿಸತಕ್ಕದ್ದು.

ರಂಭೆ.—(ವಸ್ತ್ರಾಲಂಕಾರಗಳನ್ನು ಒಪ್ಪಿಸಿ ರಾಜೋಪಚಾರಗಳನ್ನು ಮಾಡಿ) ಯುವರಾಜನೆ, ಪೂಜ್ಯರಾದ ನಾರದರಿಗೂ ನಿಮ್ಮ ತಂದೆತಾಯಿಗಳಿಗೂ ನಮಸ್ಕಾರ ಮಾಡು.

ಆಯು.—(ಕ್ರಮವಾಗಿ ನಮಸ್ಕಾರ ಮಾಡುವನು).

ನಾರ.—*ವತ್ಸನೆ ನಿನಗೆ ಮಂಗಳವಾಗಲಿ.

ರಾಜ.—ಕುಮಾರನೆ ವಂಶೋದ್ಧಾರಕನಾಗು.

ಊರ್ವ.—ಕಂದನೆ ಯಾವಾಗಲೂ ತಂದೆಗೆ ಇಷ್ಟನಾಗಿರು.

ತೆರೆಯಲ್ಲಿ.—ಯುವರಾಜನಿಗೆ ಜಯವಾಗಲಿ ಜಯವಾಗಲಿ.

---

*॥ ರಾಗ.—ಶಂಕರಾಭರಣ ॥ ॥ ಆದಿತಾಳ ॥

ರಾಜಕುಲಜನೇ । ಯುವ । ರಾಜವೀರನೇ ॥ ಪ ॥ ಈಜಗತಿಯಮಾಲಿಸುತಾ । ರಾಜಿಸೈ ಚಿರಂ ॥ ಅ ॥ ಸುಂದರಾಂಗನೇ । ಅರ । ವಿಂದನೇತ್ರನೇ ॥ ಇಂದುಕುಲವನುದ್ಧರಿಸು । ನಂದದಿಂದಲಿ ॥ ೧ ॥ ಮಹಾನುಭಾವನೇ । ಮಹನೀಯಚರಿತನೇ ॥ ವಿಹಿತಧೈರ್ಯಮಾರ್ಗ । ಬಹಳಕಾಲದಿಂ ॥ ೨ ॥ ವಿಜಯಿಸೈಮುದಾ । ಭುಜಬಲದಿಸುತಲಿ ॥ ನಿಜನಿಕಾಯದೊಳು । ರಾಜಿಸುತಲಿ ॥ ೩ ॥

ಸ್ತುತಿಪಾಠಕರಲ್ಲಿ ಒಬ್ಬನು.—

ಕಂ॥ ಕಮಲಜನಿಗತ್ರಿ ಯತ್ರಿಗೆ ।
ಹಿಮಕರ ನಿಂದುಗೆ ಬುಧಂ ಬುಧಂಗೀ ಜನವಂ ॥
ಸಮನೆನಿಸಿದಂತೆ ತಂದೆಗೆ ।
ಸಮನೆನಿಪ್ಪೆ ಪೆಂತು ನಿನಗೆ ಹರಸುವುದಿನ್ನೇಂ ॥ ೨೧ ॥

ಎರಡನೆಯವನು.—

ವೃತ್ತ॥ ಸಮುನ್ನತೆಯೊಳ್ ಭವಜ್ಜನಕನಲ್ಲಿಯುಂ ಧೀರತೆಯೊಳ್ ।
ಸಮಸ್ಥಿತಿಯೊಳಂತು ನೋಡೆ ನೃಪಲಕ್ಷ್ಮಿ ನಿನ್ನಲ್ಲಿಯುಂ ॥
ಹಿಮಾಚಲದೊಳಂ ಪಯೋನಿಧಿಯೊಳಂ ವಿಭಕ್ತಾಂಬುವಾ ।
ದಮರ್ತ್ಯನದಿಯಂತಿರಿರ್ಕ್ಕೆದಿಯೆನಲ್ಕರಂ ರಾಜಿಕುಂ ॥ ೨೨ ॥

ಅಪ್ಸರಸ್ತ್ರೀಯರು.—(ಊರ್ವಶಿಯ ಬಳಿಗೆ ಬಂದು) ಎಲೆ ಸಖಿ ಭಾಪು ಭಾಪು ನಿನ್ನ ಮಗನು ಯುವರಾಜನಾದ್ದರಿಂದಲೂ ನಿನಗೆ ಮಹಾರಾಜನ ವಿಯೋಗ ತಪ್ಪಿದ್ದರಿಂದಲೂ ನಿನಗೆ ಬಹಳ ಸಂತೋಷವಾಯಿತಲ್ಲವೆ ?

(ಎಂದೆಲ್ಲರೂ ಹರಸುವರು).

ಊರ್ವ.—ಎಲೆ ಸಖಿಯರಿರಾ, ಈ ಸಂತೋಷವು ನನ್ನದೊಬ್ಬಳದೇ ಅಲ್ಲ. ನಿಮ್ಮದೂ ಆಗಿದೆ. ಎಲೈ ವತ್ಸನೆ, ನಿಮ್ಮ ಹಿರೀತಾಯಿಗೆ ನಮಸ್ಕಾರ ಮಾಡಿ ಬಾ.

ಆಯು.—ಒಳ್ಳೇದು ಆಗಲಿ. (ಎಂದು ಹೊರಟನು)

ರಾಜಂ.—ವತ್ಸನೆ ನಿಲ್ಲುನಿಲ್ಲು; ಎಲ್ಲರೂ ಜೊತೆಯಾಗಿ ದೇವಿಯ ಬಳಿಗೆ ಹೋಗೋಣ.

ನಾರ.—

ಕಂ॥ ಮನುಜೇಂದ್ರನೆ ಕೇಳ್ ನಿನ್ನಯ ।
ತನಯನ ಯುವರಾಜಲಕ್ಷ್ಮಿಯಂ ನೋಡುತ್ತಾಂ ॥

ನೆನೆವಱೊಂದಮರವರೊ ।
ಧನಿಯೊಳ್ ಪಟ್ಟಾಭಿಷಿಕ್ತನಾದರುಮೊಗನಂ ॥ ೭೩ ॥

ರಾಜಂ.—ಈ ಪ್ರಕಾರ ತಮ್ಮನುಗ್ರಹಕ್ಕೆ ಪಾತ್ರನಾದ ಈ ಕುಮಾರನ ಭಾಗ್ಯಕಾನೇ ಅಯೋಗ್ಯನಾದಾನು?

ನಾರ.—ಮಹಾರಾಜನೆ, ಮಹೇಂದ್ರನು ನಿನಗೆ ಇದಕ್ಕಿಂತಲೂ ಇನ್ನೇನು ಸಂತೋಷವನ್ನುಂಟುಮಾಡಬೇಕು?

ರಾಜಂ.—ಮಹಾತ್ಮನಾದ ದೇವೇಂದ್ರನು ನನ್ನ ವಿಷಯದಲ್ಲಿ ಪ್ರಸನ್ನನಾಗಿರುವಾಗ್ಯೆ ನಾನು ಇನ್ನೇನು ಅಪೇಕ್ಷಿಸತಕ್ಕದ್ದುಂಟು?

ನಾರ.—ಆದರೂ ಈ ಭರತವಾಕ್ಯವು ನೆರವೇರಬೇಕೆಂದು ಕೋರುವೆನು.

ಭರತವಾಕ್ಯಂ.—

ಕಂ॥ ಧರಣಿಯೊಳಿರ್ಪ್ಪರುಮೊರ್ವ್ವನೊ ।
ಇರದೆ ಪರಸ್ಪರವಿರುದ್ಧಭಾವದೊಳಿರ್ಪ್ಪ ॥
ಸಿರಿಸರಸತಿಯರ ಸಂಗಂ ।
ಸ್ಥಿರವಾಗುಗೆ ಸಜ್ಜನರ್ಕಳೊಳ್ ಶಿವಕೃಪೆಯಿಂ ॥ ೭೪ ॥

(ಎಂದೆಲ್ಲರೂ ತೆರಳುವರು.)

ವೃತ್ತ॥ ಅವನಿಪತೀಂದ್ರಚಾಮನೃಪಧೀಸಚಿವಂ ನರಸಿಂಹವರ್ಯ್ಯಭೂ ।
ದಿವಿಜನುದೀರಿಸಲ್ಗರಪುರೀಶಸುಧೀಸುತ ನಯ್ಯಶಾಸ್ತ್ರಿ ತಾಂ ॥
ಪ್ರವಿದಿತ ಕಾಳಿದಾಸಕವಿನಿರ್ಮಿತ ಸಂಸ್ಕೃತವಿಕ್ರಮೋರ್ವಶೀ ।
ಯುವ ನಭಿರಾಮಮೆಂದೆನಿಪ ಕನ್ನಡದೊಳ್ ಪದೆದಿಂ ತೊಡಕ್ಕಿಗದಂ ॥

ಪಂಚಮಾಂಕವು ಮುಗಿದುದು.

॥ ರಾಗ.—ಸುರಟಿ ॥ ॥ ಆದಿತಾಳ ॥

ಮಂಗಳಂ ಶಿವೇ । ಮಂಗಳೋತ್ಸವೇ ॥ ಪ ॥ ಮಂಗಳಂ ಭವೇ । ತುಂಗವೈಭವೆ ॥ ಅ ॥ ಲಲಿತಾಂಬಿಕೇ । ಜಲಜಾಂಬಕೇ । ಕಲಿಭಂಜಿಕೇ । ಚಲುವಾಲಿಕೇ ॥ ೧ ॥ ಸುರಪೂಜಿತೇ । ಹರಿಸನ್ನುತೇ । ಕರುಣಾನ್ವಿತೇ । ಪರದೇವತೇ ॥ ೨ ॥ ಚಾಮಭೂಪತಿ । ಕ್ಷೇಮಕೃನ್ಮತೇ ॥ ಚಾಮುಂಡೇಶ್ವರೀ । ಸೋಮಸುಂದರೀ ॥ ೩ ॥

ಕಂ ॥ ಕ್ಷಿತಿಪೋತ್ತಮ ಚಾಮೋರ್ವೀ ।
ಪತಿಬಾಂಧವ ಲಿಂಗರಾಜನುತ್ಸಾಹಿಸೆ ಸ ॥
ನ್ಮತವಿಕ್ರಮೋರ್ವಶೀಯಂ ।
ಕೃತವಾಯ್ತಂತಯ್ಯಶಾಸ್ತ್ರಿಯಿಂ ಕನ್ನಡದೊಳ್ ॥

---

ಸಂಪೂರ್ಣಂ.

---

